ಪೂರ್ಣ ಮೊಬಲಗು ಪಾವತಿಸುವವರೆಗೆ ಶೇ. 17% ರಂತೆ ಬಡ್ಡಿಯನ್ನು ಪಾವತಿಸಬೇಕಾಗಿರುತ್ತದೆ ಎಂದು ಮೇಲ್ನೋಟಕ್ಕೆ ಕಂಡುಬಂದಿರುತ್ತದೆ. ಒಂದು ವೇಳೆ ಪ್ರತಿವಾದಿಯು ಷೆಡ್ಯೂಲಿನಲ್ಲಿರುವ ಆಸ್ತಿಯನ್ನು ಪರಭಾರೆ ಅಥವಾ ಮಾರಾಟ ಮಾಡಿದರೆ ವಾದಿ ಸಂಘಕ್ಕೆ ಬರಬೇಕಾದ ದಾವೆ ಮೊಬಲಗನ್ನು ವಸೂಲಿ ಮಾಡಲು ತೊಂದರೆಯಾಗುವ ಸಾಧ್ಯತೆ ಇರುವುದನ್ನು ಪರಿಗಣಿಸಿ ಪ್ರತಿವಾದಿಯವರಿಗೆ ನೋಟೀಸ್ ನೀಡಿ ಸದರಿ ಪ್ರತಿವಾದಿಯು ಈ ನೋಟೀಸ್ ತಲುಪಿದ 30 ದಿನಗಳ ಒಳಗೆ ವಾದಿಯವರಿಗೆ ಪಾವತಿಸಬೇಕಾಗಿರುವ ₹. 11,10,240/– (ಹನ್ನೊಂದು ಲಕ್ಷ ಹತ್ತು ಸಾವಿರದ ಇನ್ನೂರ ನಲವತ್ತು ರೂಪಾಯಿಗಳು ಮಾತ್ರ) ಗಳನ್ನು ಬಡ್ಡಿ ಸಹಿತ ಈ ನ್ಯಾಯಾಲಯವು ಹೊಂದಿರುವ ಬೆಂಗಳೂರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಮತ್ತು ರಾಮನಗರ ಜಿಲ್ಲೆ ಕೇಂದ್ರ ಸಹಕಾರ ಬ್ಯಾಂಕ್ ನಿಯಮಿತ, ಚಾಮರಾಜಪೇಟೆ, ಬೆಂಗಳೂರು ಇವರ ಪಿ.ಡಿ ಖಾತೆಗೆ ಜಮಾ ಮಾಡಿ ಅಧಿಕೃತ ಚಲನ್/ರಶೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರು ಪಡಿಸುವಂತೆ ಪ್ರತಿವಾದಿಗಳಿಗೆ ನಿರ್ದೇಶಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಹಾಗೂ 1989ನೇ ಕರ್ನಾಟಕ ಸಹಕಾರ ಸಂಘಗಳ ಕಾಯಿದೆಯ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರಮ ಸಂಖ್ಯೆ ಸಿಒ/139/ಸಿಎಲ್ಎಂ/2010 ದಿನಾಂಕ : 17–02–2011 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಡಿ. ಪಾಂಡುರಂಗ ಗರಗ್, ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು ಆದ ನಾನು ಪ್ರತಿವಾದಿ ಶ್ರೀ ಎನ್. ಅರಸಪ್ಪ ಇವರ ಹೆಸರಿನಲ್ಲಿರುವ ಈ ಕೆಳಗಿನ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಸ್ಥಿರಾಸ್ತಿಯನ್ನು ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ₹. 11,10,240/– (ಹನ್ನೊಂದು ಲಕ್ಷ ಹತ್ತು ಸಾವಿರದ ಇನ್ನೂರ ನಲವತ್ತು ರೂಪಾಯಿಗಳು ಮಾತ್ರ) ಗಳನ್ನು ಬಡ್ಡಿ ಸಹಿತ ಈ ನ್ಯಾಯಾಲಯವು ಹೊಂದಿರುವ ಬೆಂಗಳೂರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಮತ್ತು ರಾಮನಗರ ಜಿಲ್ಲೆ ಕೇಂದ್ರ ಸಹಕಾರ ಬ್ಯಾಂಕ್ ನಿಯಮಿತ, ಚಾಮರಾಜಪೇಟೆ, ಬೆಂಗಳೂರು ಇವರ ಪಿ.ಡಿ ಖಾತೆಗೆ ಈ ಆದೇಶದಿಂದ 30 ದಿನಗಳ ಅಥವಾ ಅದಕ್ಕಿಂತ ಮುಂಚಿತವಾಗಿ ಜಮಾ ಮಾಡಿ ಅಧಿಕೃತ ಚಲನ್/ರಶೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರು ಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಜಂಟಿಯಾಗಿ ಅಥವಾ ಪ್ರತ್ಯೇಕವಾಗಿ ಮೇಲೆ ತಿಳಿಸಿದಂತೆ ನಿಗಧಿತ ದಿನಗಳೊಳಗೆ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೆ ಒಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು.

**ಪ್ರತಿವಾದಿ ಶ್ರೀ ಎನ್.ಅರಸಪ್ಪ ಇವರ ಹೆಸರಿನಲ್ಲಿರುವ ಸ್ಥಿರಾಸ್ತಿಯ ಷೆಡ್ಯೂಲ್**

ಬೆಂಗಳೂರು ನಗರ 106ನೇ ವಾರ್ಡ್‌ಗೆ ಸೇರಿದ ಮಾಗಡಿ ಮುಖ್ಯರಸ್ತೆ, ಅಗ್ರಹಾರ ದಾಸರಹಳ್ಳಿ, ಕೈಗಾರಿಕಾ ನಗರ, 13ನೇ ಅಡ್ಡರಸ್ತೆ, ಮುನ್ಸಿಪಾಲ್ ನಂ. 80/1, ಪಿ.ಐ.ಡಿ. ನಂಬರ್ 21–64–80/1ನೇ ನಂಬರುಳ್ಳ ಕಟ್ಟಡ ಸಹಿತವಾದ ಆಸ್ತಿಯಳತೆ ಪೂರ್ವ ಪಶ್ಚಿಮ 22.6 ಅಡಿಗು, ಉತ್ತರ ದಕ್ಷಿಣ 24.9 ಅಡಿಗಳು, 562.74 ಚದರ ಅಡಿಗಳ ಸ್ವತ್ತಿಗೆ ಚಕ್ಕುಬಂದಿ :

| | | |
|---|---|---|
| ಪೂರ್ವ | – | ಕೆ.ಎಸ್. ಶಿವಲಿಂಗಮೂರ್ತಿಯವರ ಸ್ವತ್ತು |
| ಪಶ್ಚಿಮ | – | ರಸ್ತೆ |
| ದಕ್ಷಿಣ | – | ಕೋಮಾರಯ್ಯ ಶೆಟ್ಟಿರವರ ಸ್ವತ್ತು |
| ಉತ್ತರ | – | ಕೆ.ಎಸ್. ಗಂಗಪ್ಪರವರ ಸ್ವತ್ತು |

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ : 18–08–2016 ರಂದು ನೀಡಿರುತ್ತೇನೆ.

PR - 696
SC - 04

**ಡಿ. ಪಾಂಡುರಂಗ ಗರಗ್**
ಸಹಕಾರ ಸಂಘಗಳ ಜಂಟಿ ನಿಬಂಧಕರು,
ಬೆಂಗಳೂರು ಪ್ರಾಂತ, ಬೆಂಗಳೂರು

## COMMERCIAL TAXES DEPARTMENT

## PROCEEDINGS OF THE COMMISSIONER OF COMMERCIAL TAXES, (KARNATAKA), BENGALURU.

## CLARIFICATION UNDER SECTION 59(4) OF THE KARNATAKA VALUE ADDED TAX ACT, 2003.

### No: CLR/CR-121/2015-16, Bengaluru.

**Present :** RITVIK PANDEY, I.A.S., Commissioner of Commercial Taxes, (Karnataka) Bengaluru.

**Sub :** KVAT Act, 2003-Clarification under Section 59(4) regarding the rate of tax applicable on “Mobility Aid AUSION**”** for Blind People" - reg.

**Ref :** Application dated : 12-01-2016 M/s Innovation Hub Technologies Pvt. Ltd., No. 27/106, 11th Main, 11th B Cross, Malleswaram, Bengaluru-560 003.

(TIN : 29061276887).

In the application cited M/s Innovation Hub Technologies Pvt. Ltd., No. 27/106, 11th Main, 11th B Cross, Malleswaram, Bengaluru-560 003, (TIN : 29061276887) has sought clarification regarding the rate of tax applicable on “Mobility Aid product

manufactured for Blind People".

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that, the clarification requested by the petitioner is within the scope of the aforesaid provision and it is necessary that, the clarification be issued for the purpose of maintaining uniformity in the work of assessments and collection of revenue.

3. On verification it is noticed that the commodity "AUSION" for which clarification is sought is an aid used by the blind, and is to be classified as "Aids and Implements used by handicapped persons" as per Sl.No. 2 of 1$^{st}$ Schedule to the KVAT Act, 2003 and hence exempted.

4. Hence the following clarification is issued.

**CLARIFICATION NO.CLR.CR-121/2015-16 DATED 23.04.2016**

It is clarified that "AUSION" for which clarification is sought is an aid used by the blind, and is to be classified as "Aids and Implements used by handicapped persons" as per Sl.No. 2 of I$^{st}$ Schedule to the KVAT Act, 2003 and hence exempted.

**PR - 697**

**SC - 25**

**Ritvik Pandey**
Commissioner of Commercial Taxes
(Karnataka), Bengaluru.

**ವಾಣಿಜ್ಯ ತೆರಿಗೆ ಇಲಾಖೆ**

**ಅಧಿಸೂಚನೆ**

**ಸಂಖ್ಯೆ : ಸಿಬ್ಬಂದಿ3/3ಎಫ್/ಸಿಆರ್.09/15–16, ಬೆಂಗಳೂರು, ದಿನಾಂಕ : 17–06–2016.**

ಮಾರಾಟ ತೆರಿಗೆ ತನಿಖಾ ಠಾಣೆ (ಹುಮನಾಬಾದ ರಸ್ತೆ), ಕಲಬುರಗಿ, ಇದು ಕಲಬುರಗಿ ನಗರದಲ್ಲಿದ್ದು, ಈ ತನಿಖಾ ಠಾಣೆಯಲ್ಲಿ ತೆರಿಗೆ/ದಂಡ ಸಂಗ್ರಹಣೆಯು ಅತ್ಯಲ್ಪವಾಗಿರುವುದರಿಂದ ಹಾಗೂ ಈ ತನಿಖಾ ಠಾಣೆಯು ಗಡಿಭಾಗದ ತನಿಖಾಠಾಣೆಯಾಗದೇ ಇರುವುದರಿಂದ, ಹಾಗೂ ಈ ತನಿಖಾ ಠಾಣೆಗೆ ಮಂಜೂರಾಗಿರುವ ಹುದ್ದೆಗಳನ್ನು ಸಿಬ್ಬಂದಿ ಸಮೇತ ಸ್ಥಳಾಂತರಗೊಳಿಸಿದರೆ ರಾಜಸ್ವ ಸಂಗ್ರಹಣೆಗೆ ಇನ್ನೂ ಹೆಚ್ಚಿನ ರೀತಿಯಲ್ಲಿ ಸಹಕಾರಿಯಾಗುತ್ತದೆ ಎಂಬ ಕಾರಣದಿಂದ ಮಾರಾಟ ತೆರಿಗೆ ತನಿಖಾ ಠಾಣೆ (ಹುಮನಾಬಾದ ರಸ್ತೆ), ಕಲಬುರಗಿ, ಈ ತನಿಖಾ ಠಾಣೆಯನ್ನು ರದ್ದುಗೊಳಿಸುವುದು ಸೂಕ್ತವೆಂದು ಕಂಡು ಬಂದಿರುತ್ತದೆ.

ಆದುದರಿಂದ, ರಿತ್ವಿಕ್ ಪಾಂಡೆ, ವಾಣಿಜ್ಯ ತೆರಿಗೆಗಳ ಆಯುಕ್ತರು (ಕರ್ನಾಟಕ), ಆದ ನಾನು ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ, 2003 ಕಲಮು 53(1) ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಮಾರಾಟ ತೆರಿಗೆ ತನಿಖಾ ಠಾಣೆ (ಹುಮನಾಬಾದ ರಸ್ತೆ), ಕಲಬುರಗಿ, ಈ ತನಿಖಾ ಠಾಣೆಯನ್ನು ರದ್ದುಗೊಳಿಸಿ ಆದೇಶ ಹೊರಡಿಸುತ್ತಿದ್ದೇನೆ.

ಈ ಅಧಿಸೂಚನೆಯು ತಕ್ಷಣದಿಂದ ಜಾರಿಗೆ ಬರುತ್ತದೆ.

**PR - 698**

**ರಿತ್ವಿಕ್ ಪಾಂಡೆ**
ವಾಣಿಜ್ಯ ತೆರಿಗೆಗಳ ಆಯುಕ್ತರು.
(ಕರ್ನಾಟಕ) ಬೆಂಗಳೂರು.

## IN THE COURT OF VII ADDITIONAL C.M.M., BENGALURU CITY

It hearby notified to the public that Malleswaram Police Station Bengaluru City have seized the following Vehicles as unclaimed and such Vehicles are lying in the Police Station as unclaimed so far. Hence owner of the properties (Vehicle) may put their claim six months from the date of this publication before this Court.

Bengaluru City
Date : 17-08-2016

**VII A.C.M.M.**
Bengaluru City.

List of unclaimed vehicles are lying in the Malleswaram Police Station Bengaluru City which have been seized under C.Mis. No. 8621/2016.

**TWO WHEELERS**

| Sl.No. | NCR & Cr.Mis | P.F. No. | Vehicle type and No. | Engine No. | Chasis No. |
|---|---|---|---|---|---|
| 1 | Cri.Mis. No. 545/2011 | 141/2011 | Bajaj Pulsar KA-01-EJ-1358 | DJBBTB42032 | MD2DHDJZZPCB00399 |
| 2 | NCR No. 408/2013 | 77/2013 | TVS Fiero KA-05-EP-6053 | 0E1K32024251 | MD624C1732K13450 |

| Sl.No. | NCR & Cr.Mis | P.F. No. | Vehicle type and No. | Engine No. | Chasis No. |
|---|---|---|---|---|---|
| 3 | NCR No. 1297/14 | 98/2014 | Yamaha RX Bike, No Name Plate | 1L3022983 | 98J163022983 |
| 4 | NCR No. 707/2015 | 72/2015 | TVS Victor Reg. No. KL-04-U-5852 | OFNX1151486356 | MD625AF1951N97250 |

**PR - 700**

By Order

**VII Addl. Chief Metropolitan Magistrate,**

Bengaluru.

## IN THE COURT OF HONOURABLE XLIII ADDITIONAL CHIEF METROPOLITAN MAGISTRATE BENGALURU CITY

## NOTIFICATION NO. 71/2016, DATED 15-7-2016 / 9-8-2016

It is hereby notified to all the General public that the following unclaimed two wheeler vehicles are in the custody of Mahadevapura Police Station, Bengaluru which are seized under the various cases.

| Sl. No. | Cr/SHD/PF. No. | Make and Vehicle Name | Registration No. | Chasis No. | Engine No. | Colour |
|---|---|---|---|---|---|---|
| 1 | SHD No. 714/15 PF-71/15 | TVS Victor GX | KA-51-E-9722 | MD625AF1862A73867 | OF1A61497599 | RED |
| 2 | SHD No. 1420/15 PF-118/15 | Honda Stunner | UP-14-AY-3370 | ME4JC404E98050250 | JC40E9081937 | RED & BLACK |
| 3 | -//- | Hero Honda Splendor | KA-43-E-7624 | 06D16F15015 | 06D15E14299 | BLACK |
| 4 | -//- | Honda Stunner | KA-01-F-1014 | ME4JC40CEA8021617 | JO40E5027386 | YELLOW |
| 5 | -//- | Hero Honda Splendor Plus (without tank, shield & doom) | KA-51-R-6758 | MBLHA10EE89E40413 | HA10EA89E55605 | BLACK |
| 6 | SHD No. 1831/15 PF-120/15 | TVS Appache 160CC | TN-20-CU-1038 | MD634KE46F2F64236 | 0E4FF2799142 | GREY |
| 7 | -//- | Suzuki Access | TN-20-CH-6590 | MB8CF4CACF8630636 | F4862813237 | BLUE |
| 8 | SHD No. 1852/15 PF-124/15 | Bajaj Boxer | KA-03-EE-5058 | DFFDHK69929 | DFMBBHK57883 | BLACK |
| 9 | -//- | Hero Honda Down | TN-59-W-1165 | 03D26F00866 | 03D25E00846 | MARONE |
| 10 | -//- | Hero Honda Glamour | MP-04-MH-9621 | 07BAWC25071 | 07BASM25356 | BLACK & RED |
| 11 | -//- | Suzuki Samurai | KA-04-Q-7397 | 7602F610205 | 7602M654774 | BLACK |
| 12 | -//- | Bajaj Discover | TN-29-AF-1636 | MA2DSPAZZTWA25242 | JBMBTA46598 | BLACK & BLUE |
| 13 | SHD No. 26/16 PF-02/2016 | Honda Unicorn | KA-18-E-4375 | ME4KCO94L48016935 | KC09E0017074 | RED |
| 14 | -//- | Hero Honda Splendor | TN-09-AP-7621 | 06C16C54661 | 06C15M44480 | BLACK & WHITE |
| 15 | -//- | Hero Honda Splendor Plus | KA-50-K-8745 | MBLHA10EYB9E01014 | HA10EFB9E0393 0 | BLACK & WHITE |
| 16 | -//- | Bajaj Pulsar | KA-53-H-7709 | MB2DHDJZZNCK67261 | DJGBNK92710 | RED |
| 17 | SHD No. 31/16 PF-04/2016 | Suzuki Shogan | KA-03-X-9326 | 8906F348557 | 8904M341477 | BLACK & RED |
| 18 | -//- | Suzuki Samurai | --- | 7110F7046212 | 7110M101267 | BLACK |
| 19 | SHD No. 43/16 PF-06/2016 | TVS XY Heavy Duty | --- | MD621BD16E2H16557 | OD1HE1812268 | GREEN |
| 20 | -//- | Kinetic Zing | KA-03-EX-8533 | B1FUMO26763 | B1EM027602 | RED |
| 21 | -//- | Hero Honda | --- | --- | 97D30E00091 | BLUE |

Any person having right to claim to above vehicles shall approach the Mahadevapura Police Station, Bengaluru with necessary document within one month from today, failing which the above said vehicles will be confiscated to Government.

Any claims received after the due date will not be entertained.

PR - 701

**XLIII Addl. Chief Metropolitan Magistrate,**
Bengaluru City.

**ಕರ್ನಾಟಕ ರಾಜ್ಯದ ಔಷಧ ನಿಯಂತ್ರಕರ ಕಛೇರಿ, ಅರಮನೆ ರಸ್ತೆ, ಬೆಂಗಳೂರು–560 001.**

**ಜ್ಞಾಪನ**

**ಸಂಖ್ಯೆ : ಔನಿಇ/192/ಸಿಬ್ಬಂದಿ/2016–17, ದಿನಾಂಕ : 11–07–2016.**

**ವಿಷಯ :** ಶ್ರೀಮತಿ ನಾಜ್ಹಿಯಾ ಖುರತ್ತುಲೇನ್, ಸಹಾಯಕ ಔಷಧ ನಿಯಂತ್ರಕರು–4, ಕೇಂದ್ರ ಕಛೇರಿ, ಬೆಂಗಳೂರು ಇವರಿಗೆ ಗಳಿಕೆ ರಜೆ ಉಪಯೋಗಿಸಿಕೊಳ್ಳಲು ಅನುಮತಿ ನೀಡುವ ಬಗ್ಗೆ.

**ಉಲ್ಲೇಖ :** ಶ್ರೀಮತಿ ನಾಜ್ಹಿಯಾ ಖುರತ್ತುಲೇನ್, ಸಹಾಯಕ ಔಷಧ ನಿಯಂತ್ರಕರು–4, ಇವರ ಮನವಿ ಪತ್ರ ದಿನಾಂಕ : 24–06–2016.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖಿತ ಮನವಿಯ ಮೇರೆಗೆ, ಶ್ರೀಮತಿ ನಾಜ್ಹಿಯಾ ಖುರತ್ತುಲೇನ್, ಸಹಾಯಕ ಔಷಧ ನಿಯಂತ್ರಕರು–4, ಕೇಂದ್ರ ಕಛೇರಿ, ಬೆಂಗಳೂರು ಇವರಿಗೆ ಮಹಾಲೇಖಪಾಲರ ರಜೆ ಲಭ್ಯತೆ ನಿರೀಕ್ಷೆಯ ಮೇರೆಗೆ, ದಿನಾಂಕ : 11–07–2016 ರಿಂದ 30–07–2016ರವರೆಗೆ (ಎರಡು ದಿನಗಳೂ ಸೇರಿದಂತೆ) ಒಟ್ಟು 20 ದಿನಗಳ ಗಳಿಕೆ ರಜೆಯನ್ನು ಉಪಯೋಗಿಸಿಕೊಂಡು ರಜೆಯಲ್ಲಿ ತೆರಳಲು ಅನುಮತಿಸಿದೆ.

ಸದರಿ ಅಧಿಕಾರಿಯವರು ರಜೆಯ ಮೇಲೆ ತೆರಳುವ ಮುನ್ನ ಅವರು ಹೊಂದಿರುವ ಕೇಂದ್ರ ಕಛೇರಿಯ ಸಹಾಯಕ ಔಷಧ ನಿಯಂತ್ರಕರು–4 ಹುದ್ದೆಯ ಪ್ರಭಾರವನ್ನು ಶ್ರೀ ವೆಂಕಟೇಶ್ ಎಸ್., ಸಹಾಯಕ ಔಷಧ ನಿಯಂತ್ರಕರು–1, ಕೇಂದ್ರ ಕಛೇರಿ, ಬೆಂಗಳೂರು ಇವರಿಗೆ ವಹಿಸಿಕೊಡಲು ಈ ಮೂಲಕ ಆದೇಶಿಸಿದೆ.

ಶ್ರೀ ವೆಂಕಟೇಶ್ ಎಸ್., ಸಹಾಯಕ ಔಷಧ ನಿಯಂತ್ರಕರು–1, ಕೇಂದ್ರ ಕಛೇರಿ, ಬೆಂಗಳೂರು ಇವರು ಶ್ರೀಮತಿ ನಾಜ್ಹಿಯಾ ಖುರತ್ತುಲೇನ್ ಇವರಿಂದ ಸಹಾಯಕ ಔಷಧ ನಿಯಂತ್ರಕರು–4, ಕೇಂದ್ರ ಕಛೇರಿ, ಬೆಂಗಳೂರು ಹುದ್ದೆಯ ಪ್ರಭಾರವನ್ನು ಪಡೆದು, ಅವರ ರಜೆ ಅವಧಿ ಪೂರೈಸುವವರೆಗೆ ತಮ್ಮ ಹುದ್ದೆಯ ಕರ್ತವ್ಯಗಳೊಂದಿಗೆ ಹೆಚ್ಚುವರಿಯಾಗಿ ಹಾಗೂ ಸಮವರ್ತಿ ಪ್ರಭಾರದ ಮೇರೆಗೆ ನಿರ್ವಹಿಸಲು ಈ ಮೂಲಕ ನಿರ್ದೇಶಿಸಿದೆ.

**PR - 711** **ಔಷಧ ನಿಯಂತ್ರಕರು (ಪ್ರ)**
**SC - 25**

**ಕರ್ನಾಟಕ ರಾಜ್ಯದ ಔಷಧ ನಿಯಂತ್ರಕರ ಕಛೇರಿ, ಅರಮನೆ ರಸ್ತೆ, ಬೆಂಗಳೂರು–560 001.**

**ಜ್ಞಾಪನ**

**ಸಂಖ್ಯೆ : ಔನಿಇ/193/ಸಿಬ್ಬಂದಿ/2016–17, ದಿನಾಂಕ : 28–06–2016.**

**ವಿಷಯ :** ಶ್ರೀ ಅಮರೇಶ್ ತುಂಬಗಿ, ಉಪ ಔಷಧ ನಿಯಂತ್ರಕರು–1, ಕೇಂದ್ರ ಕಛೇರಿ, ಬೆಂಗಳೂರು ಇವರಿಗೆ ಪರಿವರ್ತಿತ ರಜೆಯನ್ನು ಉಪಯೋಗಿಸಿಕೊಳ್ಳಲು ಅನುಮತಿ ನೀಡುವ ಬಗ್ಗೆ.

**ಉಲ್ಲೇಖ :** ಶ್ರೀ ಅಮರೇಶ್ ತುಂಬಗಿ, ಉಪ ಔಷಧ ನಿಯಂತ್ರಕರು–1, ಇವರ ಮನವಿ ಪತ್ರ ದಿನಾಂಕ : 28–06–2016.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖಿತ ಮನವಿಯ ಮೇರೆಗೆ, ಶ್ರೀ ಅಮರೇಶ್ ತುಂಬಗಿ, ಉಪ ಔಷಧ ನಿಯಂತ್ರಕರು–1, ಕೇಂದ್ರ ಕಛೇರಿ, ಬೆಂಗಳೂರು ಇವರಿಗೆ ದಿನಾಂಕ : 29–06–2016 ರಿಂದ 02–07–2016ರವರೆಗೆ (ಎರಡು ದಿನಗಳೂ ಸೇರಿದಂತೆ) ಒಟ್ಟು 04 ದಿನಗಳ ಪರಿವರ್ತಿತ ರಜೆಯನ್ನು ಮಹಾಲೇಖಪಾಲರ ರಜೆ ಲಭ್ಯತೆ ನಿರೀಕ್ಷೆಯ ಮೇರೆಗೆ ಉಪಯೋಗಿಸಿಕೊಂಡು ರಜೆಯಲ್ಲಿ ತೆರಳಲು ಹಾಗೂ ಸದರಿ ಅವಧಿಯಲ್ಲಿ ಕೇಂದ್ರ ಸ್ಥಾನದಿಂದ ಹೊರಗೆ ಹೋಗಲು ಅನುಮತಿಸಿದೆ.

ಸದರಿ ಅಧಿಕಾರಿಯವರು ರಜೆಯ ಮೇಲೆ ತೆರಳುವ ಮುನ್ನ ಅವರು ಹೊಂದಿರುವ ಕೇಂದ್ರ ಕಛೇರಿಯ ಉಪ ಔಷಧ ನಿಯಂತ್ರಕರು–1 ಹುದ್ದೆಯ ಪ್ರಭಾರವನ್ನು ಶ್ರೀ ವೆಂಕಟೇಶ್ ಎಸ್., ಸಹಾಯಕ ಔಷಧ ನಿಯಂತ್ರಕರು–1, ಕೇಂದ್ರ ಕಛೇರಿ, ಬೆಂಗಳೂರು ಇವರಿಗೆ ವಹಿಸಿಕೊಡಲು ಈ ಮೂಲಕ ಆದೇಶಿಸಿದೆ.

ಶ್ರೀ ವೆಂಕಟೇಶ್ ಎಸ್., ಸಹಾಯಕ ಔಷಧ ನಿಯಂತ್ರಕರು–1, ಕೇಂದ್ರ ಕಛೇರಿ, ಬೆಂಗಳೂರು ಇವರು ಶ್ರೀ ಅಮರೇಶ್ ತುಂಬಗಿ ಇವರಿಂದ ಉಪ ಔಷಧ ನಿಯಂತ್ರಕರು–1, ಕೇಂದ್ರ ಕಛೇರಿ, ಬೆಂಗಳೂರು ಹುದ್ದೆಯ ಪ್ರಭಾರವನ್ನು ಪಡೆದು, ಅವರ ರಜೆ ಅವಧಿ ಪೂರೈಸುವವರೆಗೆ ತಮ್ಮ ಹುದ್ದೆಯ ಕರ್ತವ್ಯಗಳೊಂದಿಗೆ ಹೆಚ್ಚುವರಿಯಾಗಿ ಹಾಗೂ ಸಮವರ್ತಿ ಪ್ರಭಾರದ ಮೇರೆಗೆ ನಿರ್ವಹಿಸಲು ಈ ಮೂಲಕ ನಿರ್ದೇಶಿಸಿದೆ.

**PR - 712** **ಔಷಧ ನಿಯಂತ್ರಕರು (ಪ್ರ)**
**SC - 25**

**ಕರ್ನಾಟಕ ರಾಜ್ಯದ ಔಷಧ ನಿಯಂತ್ರಕರ ಕಛೇರಿ, ಅರಮನೆ ರಸ್ತೆ, ಬೆಂಗಳೂರು–560 001.**

**ಜ್ಞಾಪನ**

**ಸಂಖ್ಯೆ : ಔನಿಇ/143/ಸಿಬ್ಬಂದಿ/2016–17, ದಿನಾಂಕ : 18–06–2016.**

**ವಿಷಯ :** ಶ್ರೀ ಪಿ. ರಮೇಶ್, ಸಹಾಯಕ ಔಷಧ ನಿಯಂತ್ರಕರು–2, ಕೇಂದ್ರ ಕಛೇರಿ, ಬೆಂಗಳೂರು ಇವರಿಗೆ ಗಳಿಕೆ ರಜೆ ಉಪಯೋಗಿಸಿಕೊಳ್ಳಲು ಅನುಮತಿ ನೀಡುವ ಬಗ್ಗೆ.

**ಉಲ್ಲೇಖ :** ಶ್ರೀ ಪಿ. ರಮೇಶ್, ಸಹಾಯಕ ಔಷಧ ನಿಯಂತ್ರಕರು–2, ಇವರ ಮನವಿ ಪತ್ರ ದಿನಾಂಕ : 07–06–2016.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಉಲ್ಲೇಖಿತ ಮನವಿಯ ಮೇರೆಗೆ, ಶ್ರೀ ಪಿ. ರಮೇಶ್, ಸಹಾಯಕ ಔಷಧ ನಿಯಂತ್ರಕರು–2, ಕೇಂದ್ರ ಕಛೇರಿ, ಬೆಂಗಳೂರು ಇವರಿಗೆ ಮಹಾಲೇಖಪಾಲರ ರಜೆ ಲಭ್ಯತೆ ನಿರೀಕ್ಷೆಯ ಮೇರೆಗೆ, ದಿನಾಂಕ : 20–06–2016 ರಿಂದ 01–07–2016ರವರೆಗೆ (ಎರಡು ದಿನಗಳೂ ಸೇರಿದಂತೆ) ಒಟ್ಟು 12 ದಿನಗಳ ಗಳಿಕೆ ರಜೆಯನ್ನು ಉಪಯೋಗಿಸಿಕೊಂಡು ರಜೆಯಲ್ಲಿ ತೆರಳಲು ಅನುಮತಿಸಿದೆ.

ಸದರಿ ಅಧಿಕಾರಿಯವರು ರಜೆಯ ಮೇಲೆ ತೆರಳುವ ಮುನ್ನ ಅವರು ಹೊಂದಿರುವ ಕೇಂದ್ರ ಕಛೇರಿಯ ಸಹಾಯಕ ಔಷಧ ನಿಯಂತ್ರಕರು–2 ಹುದ್ದೆಯ ಪ್ರಭಾರವನ್ನು ಶ್ರೀ ಎಸ್. ವೆಂಕಟೇಶ್, ಸಹಾಯಕ ಔಷಧ ನಿಯಂತ್ರಕರು–1, ಕೇಂದ್ರ ಕಛೇರಿ, ಬೆಂಗಳೂರು ಇವರಿಗೆ ವಹಿಸಿಕೊಡಲು ಈ ಮೂಲಕ ಆದೇಶಿಸಿದೆ.

ಶ್ರೀ ಎಸ್. ವೆಂಕಟೇಶ್, ಸಹಾಯಕ ಔಷಧ ನಿಯಂತ್ರಕರು–1, ಕೇಂದ್ರ ಕಛೇರಿ, ಬೆಂಗಳೂರು ಇವರು ಶ್ರೀ ಪಿ. ರಮೇಶ್ ಇವರಿಂದ ಸಹಾಯಕ ಔಷಧ ನಿಯಂತ್ರಕರು–2, ಕೇಂದ್ರ ಕಛೇರಿ, ಬೆಂಗಳೂರು ಹುದ್ದೆಯ ಪ್ರಭಾರವನ್ನು ಪಡೆದು, ಅವರ ರಜೆ ಅವಧಿ ಪೂರೈಸುವವರೆಗೆ ತಮ್ಮ ಹುದ್ದೆಯ ಕರ್ತವ್ಯಗಳೊಂದಿಗೆ ಹೆಚ್ಚುವರಿಯಾಗಿ ಹಾಗೂ ಸಮವರ್ತಿ ಪ್ರಭಾರದ ಮೇರೆಗೆ ನಿರ್ವಹಿಸಲು ಈ ಮೂಲಕ ನಿರ್ದೇಶಿಸಿದೆ.

**ಔಷಧ ನಿಯಂತ್ರಕರು (ಪ್ರ)**

**PR - 713**
**SC - 25**

## IN THE COURT OF 11th ADDITIONAL CHIEF METROPOLITAN MAGISTRATE, MAYOHALL UNIT, BENGALURU CITY

**Draft Notification, Dated: 22.07.2016.**

It is here by notified to the General public that the following unclaimed vehicles, are in the custody **Devarajeevanahalli Police Station, Bengaluru City**, which are seized under various NCR, C.MISS cases.

| Sl. No. | C.MISS and PF No. | Vehicle No. | Vehicle Model | Engine No. | Chasis No. | Remarks |
|---|---|---|---|---|---|---|
| 1 | C.Miss No. 107A/2016 and PF No-69/2016 ITEM NO-1 | KA-03-EY-830 | Activa Honda Grey Colour | MEHJF082M68477480 | - | No Head Light and Battery |
| 2 | C.Miss No. 107A/2016 and PF No-69/2016 ITEM NO-2 | KA-04-ER-3517 | Bajaj Pulsar Blue Colour | JHGBNE95532 | - | No Battery Clutch Wire, Kickker |
| 3. | C.Miss No. 107A/2016 and PF No-69/2016 ITEM NO-3 | KA-02-ER-8696 | Bajaj Pulsar Black Colour | DHGKH45931 | MD2DHDHZZMCE17625 | - |
| 4. | C.Miss No. 107A/2016 and PF No-69/2016 ITEM NO-4 | KA-31-E-683 | Bajaj Chethak Grey Colour | 06E1176322 | - | No Battery |
| 5. | C.Miss No. 107A/2016 and PF No-69/2016 ITEM NO-5 | KA-04U-5602 | TVS Scooty | K98BM167882 | - | No Dhom and Indicator |
| 6. | C.Miss No. 114/2016 and PF No-73/2016 ITEM NO-1 | KA-01-EF-3984 | Activa Honda Grey Colour | JF08E892924 | - | No Dhom head light |

| Sl. No. | C.MISS and PF No. | Vehicle No. | Vehicle Model | Engine No. | Chasis No. | Remarks |
|---|---|---|---|---|---|---|
| 7. | C.Miss No. 114/2016 and PF No-73/2016 ITEM NO-2 | NIL | Activa Honda Black Colour | JF8E0635144 | - | - |
| 8. | C.Miss No. 114/2016 and PF No-73/2016 ITEM NO-3 | KA-04-Y-4841 | Hero Honda Black Colour | 195GBG | 00KF6811 | No Seat and Battery Indicator |
| 9. | C.Miss No. 114/2016 and PF No-73/2016 ITEM NO-4 | KA-01-W617 | Activa Honda Black Colour | JF08E0316867 | ME4JF085K88308376 | - |
| 10. | C.Miss No. 114/2016 and PF No-73/2016 ITEM NO-5 | KA-01-W-4698 | Activa Honda Silver Colour | JF08E0406975 | ME4F0850483964107 | No Battery Mirror Cap |
| 11. | C.Miss No. 114/2016 and PF No-73/2016 ITEM NO-6 | NIL | Activa Honda Gold Colour | JF08E0073797 | ME4JF085E28071290 | No Battery |
| 12. | NCR No. 310/2016 and PF No-81/2016 ITEM NO-1 | KA-05-EA-6416 | Bajaj Kawasaki Black Colour | DDMDAHA11817 | DDMDAHA54465 | Damage in Dhom |
| 13. | NCR No. 310/2016 and PF No-81/2016 ITEM NO-3 | KA-03-HA-9697 | Honda Dio Silver Colour | JF11E6032275 | - | No Battery |
| 14. | NCR No. 310/2016 and PF No-81/2016 ITEM NO-4 | KA-02-EG-5872 | Bajaj Pulsar 150CC Black Colour | DHGBJH85261 | DHVBJH8519 | No Battery |
| 15. | NCR No. 311/2016 and PF No-82/2016 ITEM NO-1 | KA-05-EK-7870 | TVS XL Heavy Duty Green Colour | D01AD1692828 | MD621BD102A75761 | No clutch wire and Indicator |
| 16. | NCR No. 311/2016 and PF No-82/2016 ITEM NO-2 | KA-53-R-744 | Suzuki Access Black Colour | - | MB8CF4CAFA8180119 | No key set and Battery Indicator |
| 17. | NCR No. 311/2016 and PF No-82/2016 ITEM NO-3 | KA-01-V-5272 | TVS Fiero Red Colour | M1207M147178 | M1207F125292 | No Head light Dhom and Indicator |
| 18. | NCR No. 311/2016 and PF No-82/2016 ITEM NO-4 | KA-03-EC-4580 | TVS XL Super Green Colour | - | P1102F403448 | - |

Any person having right to claim to above vehicles shall approach the **Devarajeevanahalli Police Station, Bengaluru City** with necessary document within one month from today failing which the above vehicles will be confiscated to Government.

Any claims received after the due date will not be entertained.

**PR - 717** **XI Additional Chief Metropolitan Magistrate,**

Bengaluru City.

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಸಿಐ 129 ಎಸ್‌ಜಿಎಫ್ 2016, ಬೆಂಗಳೂರು, ದಿನಾಂಕ : 04-08-2016.**

1) ಮೆ॥ ಯರಗಟ್ಟಿ ಶುಗರ್ಸ್ ಪ್ರೈ ಲಿ., ಚಂದರಗಿ, ರಾಮದುರ್ಗ ತಾಲ್ಲೂಕು, ಬೆಳಗಾವಿ ಜಿಲ್ಲೆ ಇಲ್ಲಿ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಕೇಂದ್ರ ಸರ್ಕಾರದಿಂದ (Industrial Entrepreneurs Memorandum) ಸಂಖ್ಯೆ : 3819/ಎಸ್‌ಐಎ/ಐಎಂಓ/2011, ದಿನಾಂಕ : 28-12-2011 ರನ್ವಯ 1,15,000 ಮೆ.ಟನ್ ಸಕ್ಕರೆ, 2,80,000 ಮೆ.ಟನ್ ಬಗಾಸ್ಸೆ ಮತ್ತು 42,500 ಮೆ.ಟನ್ ಮೊಲಾಸಿಸ್ ಉತ್ಪಾದಿಸಲು ಐಇಎಂ ಪಡೆದಿರುತ್ತದೆ. ನಂತರ ಸದರಿ ಕಾರ್ಖಾನೆಯನ್ನು ಹೊಸ ಸಕ್ಕರೆ ಕಾರ್ಖಾನೆ ಎಂದು ಅಂಗೀಕರಿಸಿ ಕೇಂದ್ರ ಸರ್ಕಾರವು ಆದೇಶ ಸಂಖ್ಯೆ ಎಫ್-25(2191)/12-ಎಸ್‌ಟಿ/5183, ದಿನಾಂಕ : 10-02-2012 ರಲ್ಲಿ ಆದೇಶ ಹೊರಡಿಸುತ್ತದೆ. ದಿನಾಂಕ : 01-02-2016 ರಂದು ನಡೆದ "State Level Single Window Clearance Committee (SLSWCC)" ಸಭೆಯಲ್ಲಿ ಈ ಕಾರ್ಖಾನೆಗೆ ₹. 105.27 ಕೋಟಿ ಬಂಡವಾಳದೊಂದಿಗೆ 46 ಎಕರೆ 21 ಗುಂಟೆಯಲ್ಲಿ ಚಂದರಗಿ ಗ್ರಾಮದಲ್ಲಿ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪಿಸುವ ಯೋಜನೆಗೆ ದಿನಾಂಕ : 26-04-2016ರ ಆದೇಶ ಸಂಖ್ಯೆ : ಸಿಐ 132 ಎಸ್‌ಪಿಐ 2016ರಲ್ಲಿ ರಾಜ್ಯ ಸರ್ಕಾರವು ತಾತ್ವಿಕ ಅನುಮೋದನೆ ನೀಡಲಾಗಿದೆ.

2) ಆಯುಕ್ತರು, ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶಕರು ದಿನಾಂಕ : 22-06-2016ರ ಪ್ರಸ್ತಾವನೆಯಲ್ಲಿ ಮೆ॥ ಯರಗಟ್ಟಿ ಶುಗರ್ಸ್ ಪ್ರೈ ಲಿ., ಚಂದರಗಿ, ರಾಮದುರ್ಗ ತಾಲ್ಲೂಕು, ಬೆಳಗಾವಿ ಜಿಲ್ಲೆ ಈ ಹೊಸ ಸಕ್ಕರೆ ಕಾರ್ಖಾನೆಯ ಸ್ಥಳದಿಂದ 7.5 ಕಿ.ಮೀ ವ್ಯಾಪ್ತಿಯಲ್ಲಿ ಬರುವ ಮೆ॥ ಸೋಮೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ, ಬೈಲಹೊಂಗಲ ಬೆಳಗಾವಿ ಜಿಲ್ಲೆ ಈ ಕಾರ್ಖಾನೆಗೆ ಹಂಚಿಕೆಯಾಗಿರುವ 1 ಗ್ರಾಮ, ಮೆ॥ ರೇಣುಕಾ ಶುಗರ್ಸ್ ಮನೋಳಿ, ಬೆಳಗಾವಿ ಜಿಲ್ಲೆ, ಈ ಕಾರ್ಖಾನೆಗೆ ಹಂಚಿಕೆಯಾಗಿರುವ 2 ಗ್ರಾಮ, ಮೆ॥ ಶಿವಸಾಗರ್ ಶುಗರ್ಸ್ ಲಿಮಿಟೆಡ್, ಉದಪುಡಿ, ರಾಮದುರ್ಗ ತಾಲ್ಲೂಕು, ಬೆಳಗಾವಿ ಜಿಲ್ಲೆ ಈ ಕಾರ್ಖಾನೆಗೆ ಹಂಚಿಕೆಯಾಗಿರುವ 1 ಗ್ರಾಮ ಹಾಗೂ ಮೆ॥ ಇಐಡಿ ಪ್ಯಾರಿ ಶುಗರ್ಸ್ ಲಿಮಿಟೆಡ್, (ಧನಲಕ್ಷ್ಮಿ ಸಸಕಾ ಗುತ್ತಿಗೆದಾರರು) ಈ ಕಾರ್ಖಾನೆಗೆ ಹಂಚಿಕೆಯಾಗಿರುವ 8 ಗ್ರಾಮಗಳು ಹೀಗೆ ಒಟ್ಟು 12 ಗ್ರಾಮಗಳನ್ನು ಸಂಬಂಧಪಟ್ಟ ಕಾರ್ಖಾನೆಗಳಿಂದ ಹಿಂದಕ್ಕೆ ಪಡೆದು ಮತ್ತು ಯಾವುದೇ ಕಾರ್ಖಾನೆಗೆ ಹಂಚಿಕೆಯಾಗದಿರುವ 2 ಗ್ರಾಮಗಳೂ ಸೇರಿದಂತೆ ಒಟ್ಟು 14 ಗ್ರಾಮಗಳನ್ನು ಈ ಸಕ್ಕರೆ ಕಾರ್ಖಾನೆಗೆ ಕಬ್ಬು ಮೀಸಲು ಕ್ಷೇತ್ರವನ್ನಾಗಿ ನಿಗಧಿಪಡಿಸುವ ಶಿಫಾರಸ್ಸು ಮಾಡಿರುತ್ತಾರೆ.

3) ರಾಜ್ಯದಲ್ಲಿ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಮತ್ತು ಹಾಲಿ ಕಾರ್ಯನಿರ್ವಹಿಸುತ್ತಿರುವ ಕಾರ್ಖಾನೆಗಳ ಸಾಮರ್ಥ್ಯ ವಿಸ್ತರಿಸುವ ಬಗ್ಗೆ ರಾಜ್ಯ ಸರ್ಕಾರದ ನೀತಿಯನ್ನು ಸರ್ಕಾರದ ಆದೇಶ ಸಂಖ್ಯೆ : ಸಿಐ 187 ಎಸ್‌ಜಿಎಫ್ 2007, ದಿನಾಂಕ : 11-09-2007ರಲ್ಲಿ ಪ್ರಕಟಿಸಲಾಗಿದೆ. ಅದರಂತೆ ಹೊಸ ಸಕ್ಕರೆ ಕಾರ್ಖಾನೆಗಳಿಗೆ ಕಬ್ಬು ಮೀಸಲು ಕ್ಷೇತ್ರವನ್ನು 15 ಕಿ.ಮೀ ಅಂತರದೊಳಗೆ ಹಂಚಿಕೆ ಮಾಡತಕ್ಕದ್ದು. ಒಂದು ವೇಳೆ 15 ಕಿ.ಮೀ. ಅಂತರದೊಳಗೆ ಸಾಕಷ್ಟು ಕಬ್ಬು ದೊರೆಯದಿದ್ದಲ್ಲಿ 15 ಕಿ.ಮೀ. ಹೊರಗಿನ ಕಬ್ಬಿನ ಮೀಸಲು ಕ್ಷೇತ್ರವನ್ನು ಹಂಚಿಕೆ ಮಾಡಬಹುದು. ಆದರೆ, ಈ ರೀತಿ ಹಂಚಿಕೆ ಮಾಡಲಾದ ಪ್ರದೇಶವು ಹಾಲಿ ಇರುವ ಬೇರೆ ಸಕ್ಕರೆ ಕಾರ್ಖಾನೆಗಳ 15 ಕಿ.ಮೀ. ವ್ಯಾಪ್ತಿಯ ಹೊರಗಡೆ ಇರತಕ್ಕದ್ದು ಎಂದು ನಿಗಧಿಪಡಿಸಿದೆ.

4) ಭಾರತ ಸರ್ಕಾರವು ಹೊರಡಿಸಿರುವ 'ಕಬ್ಬು (ನಿಯಂತ್ರಣ) ಆದೇಶ, 1966'ರ ಕಂಡಿಕೆ 6ರಲ್ಲಿ ಕಬ್ಬು ವಿತರಣೆ ಮತ್ತು ಸಾಗಾಟವನ್ನು ಕೇಂದ್ರ ಸರ್ಕಾರಕ್ಕೆ ಅಧಿಕಾರ ನೀಡಲಾಗಿದ್ದು, ಕೇಂದ್ರ ಸರ್ಕಾರವು ರಾಜ್ಯ ಸರ್ಕಾರಕ್ಕೆ ಈ ಅಧಿಕಾರವನ್ನು ಮರು ಹಂಚಿಕೆ ಮಾಡಿರುತ್ತದೆ. ಅದರಂತೆ, ಮೆ॥ ಸೋಮೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ, ಬೈಲಹೊಂಗಲ, ಬೆಳಗಾವಿ ಜಿಲ್ಲೆ ಈ ಕಾರ್ಖಾನೆಗೆ ಹಂಚಿಕೆಯಾಗಿರುವ 1 ಗ್ರಾಮ, ಮೆ॥ ರೇಣುಕಾ ಶುಗರ್ಸ್ ಮನೋಳಿ, ಬೆಳಗಾವಿ ಜಿಲ್ಲೆ ಈ ಕಾರ್ಖಾನೆಗೆ ಹಂಚಿಕೆಯಾಗಿರುವ 2 ಗ್ರಾಮ, ಮೆ॥ ಶಿವಸಾಗರ ಶುಗರ್ಸ್ ಲಿಮಿಟೆಡ್, ಉದಪುಡಿ ರಾಮದುರ್ಗ ತಾಲ್ಲೂಕು, ಬೆಳಗಾವಿ ಜಿಲ್ಲೆ ಈ ಕಾರ್ಖಾನೆಗೆ ಹಂಚಿಕೆಯಾಗಿರುವ 1 ಗ್ರಾಮ, ಹಾಗೂ ಮೆ॥ ಇಐಡಿ ಪ್ಯಾರಿ ಶುಗರ್ಸ್ ಲಿಮಿಟೆಡ್, (ಧನಲಕ್ಷ್ಮಿ ಸಸಕಾ ಗುತ್ತಿಗೆದಾರರು) ಈ ಕಾರ್ಖಾನೆಗೆ ಹಂಚಿಕೆಯಾಗಿರುವ 8 ಗ್ರಾಮಗಳು ಹೀಗೆ ಒಟ್ಟು 12 ಗ್ರಾಮಗಳನ್ನು ಸಂಬಂಧಪಟ್ಟ ಕಾರ್ಖಾನೆಗಳಿಂದ ಹಿಂದಕ್ಕೆ ಪಡೆದು ಮತ್ತು ಯಾವುದೇ ಕಾರ್ಖಾನೆಗೆ ಹಂಚಿಕೆಯಾಗಿರುವ 2 ಗ್ರಾಮಗಳೂ ಸೇರಿದಂತೆ ಈ ಕೆಳಕಂಡ ಒಟ್ಟು 14 ಗ್ರಾಮಗಳನ್ನು ಮೆ॥ ಯರಗಟ್ಟಿ ಶುಗರ್ಸ್ ಲಿ., ಚಂದರಗಿ, ರಾಮದುರ್ಗ ತಾಲ್ಲೂಕು ಬೆಳಗಾವಿ ಜಿಲ್ಲೆ, ಇಲ್ಲಿ ಸ್ಥಾಪಿಸಲಿರುವ ಹೊಸ ಸಕ್ಕರೆ ಕಾರ್ಖಾನೆಯ 7.5 ಕಿ.ಮೀ. ವ್ಯಾಪ್ತಿಯೊಳಗೆ ಬರುವ ಈ ಕಾರ್ಖಾನೆಗೆ ಕಬ್ಬು ಮೀಸಲು ಕ್ಷೇತ್ರವನ್ನಾಗಿ ಹಂಚಿಕೆ ಮಾಡಿದೆ.

| ಕ್ರ.ಸಂ. | ಗ್ರಾಮಗಳ ಹೆಸರು | ಮೆ॥ ಯರಗಟ್ಟಿ ಶುಗರ್ಸ್ ಪ್ರೈವೇಟ್ ಲಿಮಿಟೆಡ್ ದಿಂದ ಇರುವ ಅಂತರ (ಕಿ.ಮೀ.) | ಹಂಚಿಕೆಯಾಗಿರುವ ಸಕ್ಕರೆ ಕಾರ್ಖಾನೆ |
|---|---|---|---|
| 1 | ಗುಡಮದಕೇರಿ | 7.25 | ಮೆ॥ ಸೋಮೇಶ್ವರ ಸಹಕಾರಿ ಸಕ್ಕರೆ |
| 2 | ಸತ್ತಿಗೇರಿ | 6.10 | ಮೆ॥ ರೇಣುಕಾ ಶುಗರ್ಸ್ ಲಿ., ಮನೋಳಿ |
| 3 | ಸೊಪ್ಪಡ್ಲ | 5.90 | |
| 4 | ಮುರಕಟ್ನಾಳ್ | 5.00 | ಮೆ॥ ಶಿವಸಾಗರ ಶುಗರ್ಸ್ ಲಿಮಿಟೆಡ್, ಉದಪುಡಿ |
| 5 | ಎಂ.ಚಂದರಗಿ | 1.90 | ಮೆ॥ ಇಐಡಿ ಪ್ಯಾರಿ ಶುಗರ್ಸ್ ಲಿಮಿಟೆಡ್, (ಧನಲಕ್ಷ್ಮಿ ಸಸಕಾ ಗುತ್ತಿಗೆದಾರರು) |
| 6 | ಕೆ.ಚಂದರಗಿ | 4.50 | |
| 7 | ಸಿದ್ನಾಳ್ | 6.00 | |
| 8 | ತೋಟಗಟ್ಟಿ | 6.40 | |
| 9 | ಕಟಗೋಳ | 6.40 | |
| 10 | ತೋರಣಗಟ್ಟಿ | 7.00 | |
| 11 | ಕೆಸರಕೊಪ್ಪ | 4.40 | |

| ಕ್ರ.ಸಂ. | ಗ್ರಾಮಗಳ ಹೆಸರು | ಮೆ॥ ಯರಗಟ್ಟಿ ಶುಗರ್ಸ್ ಪ್ರೈವೇಟ್ ಲಿಮಿಟೆಡ್ ದಿಂದ ಇರುವ ಅಂತರ (ಕಿ.ಮೀ.) | ಹಂಚಿಕೆಯಾಗಿರುವ ಸಕ್ಕರೆ ಕಾರ್ಖಾನೆ |
|---|---|---|---|
| 12 | ಗುದಗೊಪ್ಪ | 3.10 | |
| 13 | ಇಟ್ನಾಳ್ | 4.40 | ಹಂಚಿಕೆಯಾಗದಿರುವ ಗ್ರಾಮ |
| 14 | ಕೊರೆಕೊಪ್ಪ | 2.20 | |

5) ಮೇಲ್ಕಂಡ ಕಬ್ಬು ಮೀಸಲು ಕ್ಷೇತ್ರ ಹಂಚಿಕೆಯು ಕೇಂದ್ರ ಸರ್ಕಾರ/ರಾಜ್ಯ ಸರ್ಕಾರ ಕಾಲ ಕಾಲಕ್ಕೆ ಹೊರಡಿಸುವ ಅಧಿನಿಯಮ/ನಿಯಮಗಳು/ಸೂಚನೆಗಳಿಗೆ ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ.

ಎ) ಮೆ॥ ಯರಗಟ್ಟಿ ಶುಗರ್ಸ್ ಪ್ರೈ ಲಿ., ಚಂದರಗಿ, ಕಾರ್ಖಾನೆಯು ಕಾರ್ಖಾನೆ ನಡೆಸಲು ಅಗತ್ಯವಿರುವ ಭಾರತ ಸರ್ಕಾರ/ಸಕ್ಷಮ ಪ್ರಾಧಿಕಾರವು ನೀಡುವ ಚಾಲ್ತಿಯಲ್ಲಿರುವ ಕೈಗಾರಿಕಾ ಲೈಸೆನ್ಸ್‌ನ್ನು ಹೊಂದಿರತಕ್ಕದ್ದು.

ಬಿ) ಕಬ್ಬು ಮೀಸಲು ಕ್ಷೇತ್ರಗಳನ್ನು ಹಂಚಿಕೆ ಪಡೆದ ಕಾರ್ಖಾನೆಯು ಮೇಲೆ ನಿಗಧಿಪಡಿಸಿರುವ ಪ್ರದೇಶದಿಂದಲೇ ಕಬ್ಬನ್ನು ಪಡೆಯತಕ್ಕದ್ದು, ಹೊಸ ಕಾರ್ಖಾನೆಗಳು ಸ್ಥಾಪನೆಯಾಗುವವರೆಗೂ ರೈತರ ಹಿತದೃಷ್ಟಿಯಿಂದ ಸಂಬಂಧಪಟ್ಟ ಕಾರ್ಖಾನೆಗಳಿಗೆ ಕಬ್ಬು ಸರಬರಾಜು ಮಾಡುವವರೆಗೆ ಈ ಕಬ್ಬು ಮೀಸಲು ಕ್ಷೇತ್ರ ತಾತ್ಕಾಲಿಕವಾಗಿರುತ್ತದೆ.

ಸಿ) ಮೆ॥ ಯರಗಟ್ಟಿ ಶುಗರ್ಸ್ ಪ್ರೈ ಲಿ., ಚಂದರಗಿ, ಕಾರ್ಖಾನೆಯು ವಾರ್ಷಿಕವಾಗಿ 1,15,000 ಮೆ.ಟನ್. ಸಕ್ಕರೆ ಉತ್ಪಾದಿಸುವ ಸಾಮರ್ಥ್ಯ ಹೊಂದಿರುತ್ತದೆ. ಸದರಿ ಕಾರ್ಖಾನೆಗೆ ವಾರ್ಷಿಕವಾಗಿ ಲಭ್ಯವಾಗುವ ಕಬ್ಬಿನ ಪ್ರಮಾಣವು 5.02 ಲಕ್ಷ ಮೆ.ಟನ್ ಇರುತ್ತದೆ. ಈ ಕಾರ್ಖಾನೆಯು ಸ್ಥಾಪನೆಯಾಗುವವರೆಗೆ, ತಾತ್ಕಾಲಿಕವಾಗಿ ಈ ಹಿಂದೆ ಹಂಚಿಕೆ ಮಾಡಿದ್ದ ಕಾರ್ಖಾನೆಗಳು ಕಬ್ಬನ್ನು ರೈತರಿಂದ ಖರೀದಿಸಬಹುದಾಗಿದೆ.

ಡಿ) ಕಬ್ಬು ಮೀಸಲು ಪ್ರದೇಶದ ಪ್ರತಿ ಕಬ್ಬು ಬೆಳೆಗಾರ ಅಥವಾ ಪ್ರತಿ ಕಬ್ಬು ಬೆಳೆಗಾರರ ಸಹಕಾರಿ ಸಂಘವು ಮೇಲ್ಕಂಡ ಕಾರ್ಖಾನೆಗೆ ಕಬ್ಬು ಸರಬರಾಜು ಮಾಡುವ ಕಬ್ಬಿನ ಪ್ರಮಾಣದ ಬಗ್ಗೆ ಕಾರ್ಖಾನೆಯು ಒಪ್ಪಂದ ಮಾಡಿಕೊಳ್ಳುವುದು.

ಇ) ಮೇಲ್ಕಂಡ ಕಬ್ಬು ಮೀಸಲು ಪ್ರದೇಶದಿಂದ ಮೇಲೆ ಹಂಚಿಕೆ ಮಾಡಲಾದ ಕಾರ್ಖಾನೆಗೆ ಹೊರತುಪಡಿಸಿ ಹೊರಗಿನ ಪ್ರದೇಶಕ್ಕೆ ಯಾವುದೇ ಕಾರಣಕ್ಕೂ ಜಿಲ್ಲಾಧಿಕಾರಿಗಳ ಆದೇಶವಿಲ್ಲದೆ ಸಾಗಣೆ ಮಾಡುವ ಹಾಗಿಲ್ಲ.

ಎಫ್) ಯಾವುದೇ ಸಕ್ಕರೆ ಕಾರ್ಖಾನೆಯು ತನಗೆ ಹಂಚಿಕೆಯಾದ ಕಬ್ಬು ಮೀಸಲು ಪ್ರದೇಶವನ್ನು ಹೊರತುಪಡಿಸಿ ಬೇರೆ ಪ್ರದೇಶಗಳಲ್ಲಿ ಬೆಳೆದಿರುವ ಕಬ್ಬನ್ನು ಸಕ್ಷಮ ಪ್ರಾಧಿಕಾರದ ಅನುಮತಿ ಇಲ್ಲದೇ ಖರೀದಿಸಿದಲ್ಲಿ ಅಂತಹ ಕಾರ್ಖಾನೆಗಳ ವಿರುದ್ಧ ನಿಯಮಾನುಸಾರ ಕ್ರಮ ಜರುಗಿಸಲಾಗುವುದು.

ಜಿ) ಕಬ್ಬು ಸಾಗಣೆ ಮಾಡಲು ಪರವಾನಿಗೆ ಮಂಜೂರಾತಿ ಅರ್ಜಿಯನ್ನು ನಮೂನೆ-2ರಲ್ಲಿ ₹. 5/- ಶುಲ್ಕ ಮತ್ತು ₹. 100/- ಭದ್ರತಾ ಠೇವಣಿ ಶುಲ್ಕದೊಂದಿಗೆ ಸಲ್ಲಿಸತಕ್ಕದ್ದು. ಒಪ್ಪಂದದ ಯಾವುದೇ ಷರತ್ತು ಉಲ್ಲಂಘಿಸಿದಲ್ಲಿ ಆ ಬಗ್ಗೆ ಜಿಲ್ಲಾಧಿಕಾರಿಯು ಸಂಬಂಧಪಟ್ಟವರಿಗೆ ಕಾರಣ ಕೇಳುವ ನೋಟಿಸು ಜಾರಿ ಮಾಡಿ, ಹೇಳಿಕೆ ಪಡೆದು ಸೂಕ್ತವೆಂದು ಕಂಡುಬಂದಲ್ಲಿ ಭದ್ರತಾ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಸೂಕ್ತ ಆದೇಶ ಹೊರಡಿಸಬಹುದು.

ಹೆಚ್) ಈ ಅಧಿಸೂಚನೆ ಮೂಲಕ ಹಂಚಿಕೆ ಮಾಡಿರುವ ಕಬ್ಬು ಮೀಸಲಾತಿ ಪ್ರದೇಶಗಳನ್ನು ಪರಿಷ್ಕರಿಸುವ ಅಥವಾ ರದ್ದುಪಡಿಸುವ ಹಕ್ಕನ್ನು ರಾಜ್ಯ ಸರ್ಕಾರ ಹೊಂದಿರುತ್ತದೆ.

ಐ) ಈ ಆದೇಶವು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ, ಧಾರವಾಡ ಇಲ್ಲಿ ದಾಖಲಿಸಿರುವ ರಿಟ್ ಅರ್ಜಿ ಸಂಖ್ಯೆ : 60683/2012ರ ಅಂತಿಮ ತೀರ್ಪಿಗೆ ಒಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಅಶೋಕ ಡಿ. ಬಾಗೋಜಿಕೊಪ್ಪ,**
ಸರ್ಕಾರದ ಅಧೀನ ಕಾರ್ಯದರ್ಶಿ, (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ.

PR - 719
SC - 200

## ಪೊಲೀಸ್ ಇಲಾಖೆ

**ಪೊಲೀಸ್ ಕಮೀಷನ್‌ರವರ ಕಛೇರಿ, ನಂ. 1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ.**

**ಅಧಿಸೂಚನೆ**

**ಸಂಖ್ಯೆ 348/ಸಾಮಾನ್ಯ/ಅಸಿಪಿ(ಸಂ)/2016, ಬೆಂಗಳೂರು, ದಿನಾಂಕ : 19ನೇ ಆಗಸ್ಟ್ 2016.**

ಬೆಂಗಳೂರು ನಗರ – ಕಬ್ಬನ್‌ಪಾರ್ಕ್ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಯ ಲ್ಯಾವೆಲಿ ರಸ್ತೆಯು (ಕಾಫಿ ಡೇ ಜಂಕ್ಷನ್‌ನಿಂದ ಬೆಂಗಳೂರು ಕ್ಲಬ್‌ವರೆಗೆ) ಕಿರಿದಾಗಿದ್ದು ದ್ವಿಮುಖ ಸಂಚಾರ ವ್ಯವಸ್ಥೆಯಿಂದ ಕೂಡಿರುತ್ತದೆ. ಈ ರಸ್ತೆಯಲ್ಲಿ ಬಿಷಪ್ ಕಾಟನ್ ಬಾಲಕರ ಶಾಲೆಯ ಹಿಂಬದಿಯ ಗೇಟ್ ಅಲ್ಲದೆ ಹಲವಾರು ವಾಸದ ಮನೆಗಳಿರುತ್ತವೆ. ಈ ರಸ್ತೆಯಲ್ಲಿ ಪಾದಚಾರಿ ಮಾರ್ಗ ಇರುವುದಿಲ್ಲ. ಈ ರಸ್ತೆಯ ಕಾಫೀ ಡೇ ಜಂಕ್ಷನ್‌ನಿಂದ (ಗ್ರ್ಯಾಂಟ್ ಸರ್ಕಲ್) ಬೆಂಗಳೂರು ಕ್ಲಬ್‌ನ ಕೊನೆಯವರೆಗೆ ಅಂದರೆ ರಿಚ್ಮಂಡ್ ವೃತ್ತದವರೆಗೆ ರಸ್ತೆಯ ಪೂರ್ವ ದಿಕ್ಕಿಗೆ ದ್ವಿಚಕ್ರ ಮತ್ತು ನಾಲ್ಕು ಚಕ್ರಗಳ ವಾಹನಗಳ ನಿಲುಗಡೆಗೆ ವ್ಯವಸ್ಥೆ ಇರುವುದರಿಂದ ರಸ್ತೆಯ ಉದ್ದಕ್ಕೂ ವಾಹನಗಳನ್ನು ನಿಲುಗಡೆ ಮಾಡುತ್ತಿರುತ್ತಾರೆ. ಹೆಚ್ಚಿನ ವಾಹನಗಳು ರಿಚ್‌ಮಂಡ್ ವೃತ್ತದ ಕಡೆಯಿಂದ ಲ್ಯಾವೆಲಿ ರಸ್ತೆಯ ಕಾಫಿ ಡೇ ಜಂಕ್ಷನ್-ವಿಠಲ್ ಮಲ್ಯ ರಸ್ತೆಯ ಮೂಲಕ ಸಿದ್ದಲಿಂಗಯ್ಯ ವೃತ್ತಕ್ಕೆ ಬರುತ್ತಿದ್ದು ರಸ್ತೆಯ ಒಂದು ಬದಿ ವಾಹನಗಳನ್ನು ನಿಲುಗಡೆ ಮಾಡುತ್ತಿರುವುದರಿಂದ ಉತ್ತರ ಮತ್ತು ದಕ್ಷಿಣಾಭಿಮುಖವಾಗಿರುವ ದ್ವಿಮುಖ ಸಂಚಾರ ವ್ಯವಸ್ಥೆಯಲ್ಲಿ ವಾಹನಗಳ ದಟ್ಟಣೆ ಹೆಚ್ಚಿ ರಸ್ತೆಯಲ್ಲಿ ಸಂಚರಿಸುವ ಶಾಲಾ ಮಕ್ಕಳ ಹಾಗೂ ಸ್ಥಳೀಯ ನಾಗರಿಕರ ಸುರಕ್ಷತೆಗೆ ತೊಂದರೆಯಾಗಿರುವುದಲ್ಲದೆ ವಾಹನಗಳ ಸುಗಮ ಸಂಚಾರಕ್ಕೂ ಅಡಚಣೆಯಾಗಿ ಆಗಿಂದಾಗ್ಗೆ ಸಂಚಾರ ಸ್ಥಗಿತಕ್ಕೆ ಹಾಗೂ ಅಪಘಾತಗಳಿಗೂ ಸಹ ಕಾರಣವಾಗುತ್ತಿದೆ. ಈ ರಸ್ತೆಯಲ್ಲಿ ವಾಹನಗಳ ಸುಗಮ ಸಂಚಾರಕ್ಕೆ ಹಾಗೂ ಶಾಲಾ ಮಕ್ಕಳ ಮತ್ತು ಸ್ಥಳೀಯ ನಾಗರಿಕರ ಸುರಕ್ಷತೆಗಾಗಿ ಹಾಲಿ ರಸ್ತೆಯ ಒಂದು ಬದಿ ಇರುವ ವಾಹನಗಳ ನಿಲುಗಡೆಯನ್ನು ನಿಷೇಧಿಸುವುದು ಅತ್ಯವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್, 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎನ್.ಎಸ್. ಮೇಘರಿಖ್, ಐಪಿಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಲ್ಯಾವೆಲ್ಲಿ ರಸ್ತೆಯಲ್ಲಿ ವಾಹನಗಳ ನಿಲುಗಡೆ ನಿಷೇಧ ಸಂಬಂಧ ಈ ಕೆಳಕಂಡಂತೆ ಆದೇಶಿಸಿರುತ್ತೇನೆ.

**ಲ್ಯಾವೆಲ್ಲಿ ರಸ್ತೆಯಲ್ಲಿ ಕಾಫಿ–ಡೇ ಜಂಕ್ಷನ್ (ಗ್ರ್ಯಾಂಟ್ ಸರ್ಕಲ್) ನಿಂದ ರಿಚ್ಮಂಡ್ ವೃತ್ತದವರೆಗೆ ರಸ್ತೆಯ ಪೂರ್ವ ದಿಕ್ಕಿಗೆ ವಾಹನಗಳ ನಿಲುಗಡೆಯನ್ನು ನಿಷೇಧಿಸುವ ಮೂಲಕ ರಸ್ತೆಯ ಎರಡೂ ಬದಿಗಳಲ್ಲಿ ವಾಹನಗಳ ನಿಲುಗಡೆಯನ್ನು ಸಂಪೂರ್ಣವಾಗಿ ನಿಷೇಧಿಸಲಾಗಿದೆ.**

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ, 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್, 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ : 19–08–2016 ರಿಂದ ಜಾರಿಯಲ್ಲಿರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ಅಂದರೆ ದಿನಾಂಕ : 19–08–2016 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎನ್.ಎಸ್. ಮೇಘರಿಖ್,**
ಪೊಲೀಸ್ ಕಮೀಷನರ್,
ಬೆಂಗಳೂರು ನಗರ.

**PR - 720**

## ತುಮಕೂರು ಮಹಾನಗರ ಪಾಲಿಕೆ, ತುಮಕೂರು

**ಸಂಖ್ಯೆ : ತುಮಪಾ/ಆ.ಶಾ./ಸಿಆರ್/26/2016–17, ದಿನಾಂಕ : 23–08–2016.**

ತುಮಕೂರು ನಗರಸಭೆಯು ಮಹಾನಗರಪಾಲಿಕೆಗಾಗಿ ಉನ್ನತೀಕರಣಹೊಂದಿರುತ್ತದೆ. ಹಾಲಿ ಇರುವ ಉದ್ದಿಮೆಯ ಪರವಾನಿಗೆಯ ಮೊತ್ತಗಳು 2004ನೇ ಇಸವಿಯಿಂದ ಜಾರಿಯಲ್ಲಿದ್ದು ಪರಿಷ್ಕರಣೆಗೊಂಡಿರುವುದಿಲ್ಲ. ಆದ್ದರಿಂದ ಮಹಾನಗರಪಾಲಿಕೆಯ ಸಾಮಾನ್ಯ ಸಭೆಯಲ್ಲಿ ಚರ್ಚಿಸಲಾಗಿ ಪಾಲಿಕೆಯ ಆರ್ಥಿಕ ಪರಿಸ್ಥಿತಿಯನ್ನು ಉತ್ತಮಪಡಿಸಲು ಉದ್ದಿಮೆ ಪರವಾನಿಗೆ ಶುಲ್ಕವನ್ನು ಪರಿಷ್ಕರಿಸಬಹುದಾಗಿದ್ದು, ಈ ಕೆಳಕಂಡಂತೆ ಶುಲ್ಕವನ್ನು ಪರಿಷ್ಕರಿಸಬಹುದಾಗಿದ್ದು ವಿವರಿಸಿದೆ.

| ಕ್ರ.ಸಂ. | ವಾಸದ ಕಟ್ಟಡಗಳು | ಈಗಿರುವ ದರ ₹.ಗಳಲ್ಲಿ | ಪರಿಷ್ಕರಿಸಲಾಗಿರುವ ದರ ₹.ಗಳಲ್ಲಿ |
|---|---|---|---|
| 1 | ಬೂಸ ಅಂಗಡಿ | 500 | 1000 Retail |
| 2 | ಕಾಫೀ ಟೀ ಅಂಗಡಿ | 300 | 500 |
| 3 | ಬೂಸ ಅಂಗಡಿ (ದೊಡ್ಡದು) | 1000 | 4000 |
| 4 | ಚಿಕ್ಕ ಹೋಟಲ್ | 500 | 1000 |
| 5 | ದೊಡ್ಡ ಹೋಟಲ್ | 1000 | 3000 |
| 6 | ಫಾನ್ಸಿ ಸ್ಟೋರ್ಸ್ | 300 | 1000 |
| 7 | ವಸತಿ ಗೃಹಗಳು (ಚಿಕ್ಕದು) | 1000 | 5000 |
| 8 | ವಸತಿ ಗೃಹಗಳು (ದೊಡ್ಡದು) | 2000 | 7500 |
| 9 | ಚಿತ್ರಮಂದಿರ | 2500 | 20,000 |
| 10 | ಕಲ್ಯಾಣ ಮಂಟಪ (ಚಿಕ್ಕದು) | 2500 | 10,000 |
| 11 | ಕಲ್ಯಾಣ ಮಂಟಪ (ದೊಡ್ಡದು) | 4000 | 20,000 |
| 12 | ಕೇಬಲ್ ನೆಟ್‌ವರ್ಕ್ಸ್ | 1000 | 4000 |
| 13 | ಬಟ್ಟೆ ಅಂಗಡಿ ಚಿಕ್ಕದು | 500 | 1000 |
| 14 | ಬಟ್ಟೆ ಅಂಗಡಿ ದೊಡ್ಡದು | 1000 | 4000 |
| 15 | ಕ್ಲಿನಿಕ್‌ಗಳು | 1000 | 4000 |
| 16 | ನರ್ಸಿಂಗ್ ಹೋಂ/ಆಸ್ಪತ್ರೆಗಳು (ಚಿಕ್ಕದು) ಎ<br>ನರ್ಸಿಂಗ್ ಹೋಂ/ಆಸ್ಪತ್ರೆಗಳು (ಮಧ್ಯಮ) ಬಿ<br>ನರ್ಸಿಂಗ್ ಹೋಂ/ಆಸ್ಪತ್ರೆಗಳು (ದೊಡ್ಡದು) ಸಿ | 4000 | 10,000<br>20,000<br>30,000 |
| 17 | ವೈನ್ ಸೆಂಟರ್ | 1000 | 5000 |
| 18 | ಬಾರ್ ಅಂಡ್ ರೆಸ್ಟೋರೆಂಟ್ | 2000 | 10,000 |
| 19 | ಮದ್ಯ ಸಗಟು ವ್ಯಾಪಾರ (ಹೋಲ್ ಸೇಲ್) | 3000 | 10,000 |
| 20 | ಶೇವಿಂಗ್ ಸೆಲೂನ್ ಎ ಮತ್ತು ಬಿ | 350 | 1000 ರಿಂದ 2000 |
| 21 | ಎಸ್.ಟಿ.ಡಿ ಮತ್ತು ಐ.ಎಸ್.ಡಿ | 350 | 500 |
| 22 | ವರ್ಕ್ಸ್‌ಷಾಪ್ (ಹೆಚ್.ಪಿ ಬೇರೆ ಮೊತ್ತ) 1 ಹೆಚ್.ಪಿಗೆ 50 ₹. | 350 | 1000 |
| 23 | ಸಣ್ಣ ಉದ್ದಿಮೆಗಳು | 1000 | 2000 |

| ಕ್ರ.ಸಂ. | ವಾಸದ ಕಟ್ಟಡಗಳು | ಈಗಿರುವ ದರ ₹.ಗಳಲ್ಲಿ | ಪರಿಷ್ಕರಿಸಲಾಗಿರುವ ದರ ₹.ಗಳಲ್ಲಿ |
|---|---|---|---|
| 24 | ಮಧ್ಯಮ ಉದ್ದಿಮೆಗಳು | 2000 | 5000 |
| 25 | ಭಾರಿ ಉದ್ದಿಮೆಗಳು | 4000 | 10,000 |
| 26 | ಬೇಕರಿ ಅಂಡ್ ಕಾಂಡಿಮೆಂಟ್ ಚಿಕ್ಕದು | 500 | 1000 |
| 27 | ಬೇಕರಿ ಅಂಡ್ ಕಾಂಡಿಮೆಂಟ್ ದೊಡ್ಡದು | 1000 | 2000 |
| 28 | ಡ್ರೈಕ್ಲಿನರ್ | 300 | 500 |
| 29 | ಗಿರವಿ ಅಂಗಡಿಗಳು | 1000 | 3000 |
| 30 | ಫ್ಲೋರ್ ಮಿಲ್ ಹೆಚ್ ಮತ್ತು ಬೇರೆ ಹೆಚ್.ಪಿ 1ಕ್ಕೆ | 500 | 500 |
| 31 | ಬ್ರೌಸಿಂಗ್ ಸೆಂಟರ್ | 1000 | 2000 |
| 32 | ಕಾಫೀ ವರ್ಕ್ಸ್ ಚಿಕ್ಕದು | 300 | 500 |
| 33 | ಕಾಫೀ ವರ್ಕ್ಸ್ ದೊಡ್ಡದು | 1000 | 2000 |
| 34 | ಚಪ್ಪಲಿ ಅಂಗಡಿ | 500 | 1000 |
| 35 | ಷೂ ಕಂಪನಿ ಅಂಗಡಿಗಳು | 2000 | 7500 |
| 36 | ಪೋಟೋ ಸ್ಟುಡಿಯೋ | 300 | 2000 |
| 37 | ಕಲರ್ ಪೋಟೋ ಸ್ಟುಡಿಯೋ | 500 | 3000 |
| 38 | ಗಾರ್ಮೆಂಟ್ಸ್ | | 10,000 |
| 39 | ಜ್ಯೂಯಲರೀಸ್ | | 5000 |
| 40 | ಆಯಿಲ್ ಡಿಪೋ | | 2000 |
| 41 | ಪೆಟ್ರೋಲ್ ಬಂಕ್ | | 5000 |
| 42 | ಮೊಬೈಲ್ ಸೇಲ್ಸ್ ಮತ್ತು ಸರ್ವಿಸ್ | | 2000 |
| 43 | ಮೊಬೈಲ್ ಸೇಲ್ಸ್ ಚಿಕ್ಕದು ಎ ಮತ್ತು ಬಿ | | 1000 |
| 44 | ಆಟೋಮೊಬೈಲ್ಸ್ ಚಿಕ್ಕದು | | 2000 |
| 45 | ಫೈನಾನ್ಸ್ | | 2000 |
| 46 | ಆಟೋ ಮೊಬೈಲ್ ದೊಡ್ಡದು | | 5000 |
| 47 | ಮಿನರಲ್ ವಾಟರ್ ಸಪ್ಲೈ ಹೆಚ್.ಪಿ ಎಕ್ಸ್‌ಟ್ರಾ | | 5000 |
| 48 | ಟ್ಯಾಂಕರ್ ವಾಟರ್ ಸಪ್ಲೈ ಹೆಚ್.ಪಿ. ಎಕ್ಸ್‌ಟ್ರಾ | | 1000 |
| 49 | ಪೈಂಟ್ಸ್ ಹಾರ್ಡ್‌ವೇರ್ಸ್ | | 3000 |
| 50 | ಗ್ಯಾಸ್ ಮತ್ತು ಪ್ಲೈವುಡ್ಸ್ ಎ, ಬಿ | | 3000<br>1000 |
| 51 | ಟಿ.ವಿ. ಶೋ ರೂಂ | | 5000 |
| 52 | ಫಿಜಾ ಹಾಟ್ಸ್ | | 5000 |
| 53 | ಜ್ಯೂಸ್ ಸೆಂಟರ್ಸ್ | | 1000 |
| 54 | ಡಿಪಾರ್ಟ್‌ಮೆಂಟಲ್ ಸ್ಟೋರ್ಸ್ | | 5000 |
| 55 | ವಾಚ್ ಸೇಲ್ಸ್ ಮತ್ತು ಸರ್ವಿಸ್ | | 2000 |
| 56 | ಗ್ಯಾರೇಜ್ | | 1000 |
| 57 | ಫರ್ನಿಚರ್ಸ್ | | 2000 |
| 58 | ಗ್ಯಾಸ್ ಎಜೆನ್ಸೀಸ್ | | 5000 |
| 59 | ಬ್ಯೂಟಿ ಪಾರ್ಲರ್<br>ಎ<br>ಬಿ | | 7500<br>3000 |
| 60 | ಹೋಟೆಲ್ ಮತ್ತು ಲಾಡ್ಜಿಂಗ್ | | 10,000 |
| 61 | ಬಾರ್ ಅಂಡ್ ರೆಸ್ಟೋರೆಂಟ್<br>ಎ<br>ಬಿ<br>ಸಿ | | 10,000<br>15,000<br>20.000 |

| ಕ್ರ.ಸಂ. | ವಾಸದ ಕಟ್ಟಡಗಳು | ಈಗಿರುವ ದರ ₹.ಗಳಲ್ಲಿ | ಪರಿಷ್ಕರಿಸಲಾಗಿರುವ ದರ ₹.ಗಳಲ್ಲಿ |
|---|---|---|---|
| 62 | ಪ್ರಿಂಟಿಂಗ್ ಪ್ರೆಸ್ | | 2000 |
| 63 | ಪಿ.ಜಿ. ಹಾಸ್ಟೆಲ್<br>ಎ<br>ಬಿ | | 5000<br>2500 |
| 64 | ಮಾರ್ಬಲ್ಸ್ ಮತ್ತು ಗ್ರಾನೈಟ್ಸ್ | | 5000 |
| 65 | ಸಿಮೆಂಟ್ | | 5000 |

**ಆಯುಕ್ತರು,**
ತುಮಕೂರು ಮಹಾನಗರ ಪಾಲಿಕೆ,
ತುಮಕೂರು.

**PD - 104**
**SC - 05**

## IN THE COURT OF THE ADDITIONAL REGISTRAR OF CO-OPERATIVE SOCIETIES (R.441), ARBITRATION COURT, K.S.C. APEX BANK LIMITED, BENGALURU.

**CASE No : RCS/CRD/KME-8/459/2012-13**

**CASE No : JRD/AXB/01/2013-14**

**CASE No : ADDL.RD/AXB/68/2016-17**

| Petitioner | Respondents |
|---|---|
| Chief Executive Officer,<br>Karnataka State Co-operative Apex Bank Ltd.,<br>'Uthunga', No. 1, Pampamahakavi Road, Chamarajpet,<br>Bengaluru-560 018. | 1. M/s Construction Solution (Bengaluru) Pvt. Ltd., No. 164, I Cross, I Stage, A.E.C.S. Layout, Sanjaynagar, RMV II Stage, Bengaluru-560 094.<br>**Represented by its Managing Director**<br>Sri Rajesh Kumar K.<br>Smt. Shalini R. Kumar<br>**Director**<br>Sri Suresh T.<br>2. Sri Rajesh Kumar K.<br>S/o Sri Krishnamurthy T.N.,<br>No. 301, III Floor, Anriya Residency,<br>M.S.R. Hospital, 6th "A" Cross,<br>Ashrama Colony, RMV II Stage,<br>Bengaluru-560 094.<br>3. Smt Shalini R. Kumar W/o Rajesh Kumar K.<br>No. 301, III Floor, Anriya Residency,<br>M.S.R. Hospital, 6th "A" Cross,<br>Ashrama Colony, RMV II Stage,<br>Bengaluru-560 094.<br>4. Sri Suresh T. S/o Thimmaiah,<br>No. 50, 5th Cross, Maruthi Layout,<br>West of Chord Road, Bengaluru-560 079.<br>5. Sri Jayaramaiah<br>S/o Late Doddamuninagappa<br>6. Sri Muniramu<br>S/o Late Doddamuninagappa<br>7. Sri D. Venkatesh<br>S/o Late Doddamuninagappa<br>Respondent No. 5 to 7 are residing at No. 211, Grape Garden, Vishwanatha Nagenahalli Main Road, R.T. Nagar, Bengaluru-560 032. |

**CONFIRMATION OF ATTACHMENT ORDER DATED 01-02-2016 ON INTERLOCUTORY APPLICATION U/S 103 OF KCS ACT FILED BY PETITIONER – BANK ON 02-01-2014 SEEKING ATTACHMENT BEFORE JUDGEMENT OF SCHEDULED PROPERTIES OF R1 & R2 (AS PER DIRECTIONS OF HON'BLE HIGH COURT ORDER DATED : 25-03-2014 IN WP 6908/2014)**

**ORDER**

**CONFIRMATION OF CONDITIONAL ATTACHMENT OF SCHEDULED PROPERTIES BEFORE JUDGEMENT U/S 103 OF KCS ACT.**

The Interlocutory Application filed by the Petitioner on 02-01-2014 was allowed on 01-02-2016 and through a conditional attachement order dated : 01-02-2016, in exercise of the powers conferred to the Court under Section 103 of the KCS Act, 1959, the scheduled properties belonging to respondents R2 & R3 were conditionally attached prohibiting them from selling, transferring, alleneating, encumbering, charging or creating any third party right over the scheduled property, subject to the following conditions that if the respondents or any parties affected wish to raise the attachment they shall deposit a sum of ₹. 9,18,67, 602/- as on 31-03-2012 plus interest amount @ 14.5% p.a. on a principal sum of ₹. 7,97,00,000/- from 01-04-2012 with the Petitioner Bank and such documents of remittance of the above specified sum shall be furnished to this Court within 30 days from the date of this order failing which further order confirming the attachment will be passed. Having observed the given and specified time, neither the Respondents nor the other parties interested in the Scheduled Attached Property have furnished the particulars of remittance of the specified sum. Hence, the attachement of schedule properties so made vide this Court Order dated 01-02-2016 is made obsolute.

**Schedule of Property**

All that piece and parcel of the site bearing No. 164, situated at AECS Layout, Ist Stage, Geddalahalli, Bengaluru, relating to the plots measuring 27-30 Acres in Sy. Nos : 12/1, 12/3, 24/3, 31/3, 32/1, 32/3, 32/4, 33/2, 35/2, 36/3 and 39/1 of Geddalahalli Village, Bengaluru North Taluk, Bengaluru measuring East to West 61 feet and North to South 40 feet in all measuring 2440 Sq.ft. and bounded on the :

East by : Site No. 162,
West by : Road,
North by : Private Property
South by : Site No. 165

Given under my hand & Seal on this day 11-04-2016.

Additional Registrar of Co-op. Societies (R-441)
Arbitration Court,
Karnataka State Co-op Apex Bank Ltd., Bengaluru.

**PD - 105**
**SC - 05**

**ನಗರಾಭಿವೃದ್ಧಿ ಸಚಿವಾಲಯ**
**ಅಧಿಸೂಚನೆ**

**ಸಂಖ್ಯೆ: ನಅಇ 87 ನಯೋಸೇ 2016, ಬೆಂಗಳೂರು, ದಿನಾಂಕ: 10–06–2016.**

ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯ ನಗರ ಮತ್ತು ಗ್ರಾಮಾಂತರ ಯೋಜನಾ ಹೆಚ್ಚುವರಿ ನಿರ್ದೇಶಕರ ವೃಂದದ ದಿನಾಂಕ 01.01.2016 ರಲ್ಲಿದ್ದರಂತೆ ಈ ಕೆಳಕಂಡ ಕರಡು ತಾತ್ಕಾಲಿಕಾ ಜ್ಯೇಷ್ಠತಾ ಪಟ್ಟಿಯಲ್ಲಿ ನೀಡಲಾಗಿರುವ ಸ್ಥಾನ, ಸೇವಾ ವಿವರ ಮುಂತಾದವುಗಳ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಅಂತಹ ಆಕ್ಷೇಪಣೆಗಳನ್ನು ಅವಶ್ಯವಿರುವ ದಾಖಲೆಗಳೊಂದಿಗೆ ಹಾಗೂ ಸಮರ್ಥನೆಗಳೊಂದಿಗೆ ಈ ಪ್ರಕಟಣೆ ಹೊರಡಿಸಿದ 15 ದಿನಗಳ ಒಳಗಾಗಿ ಸರ್ಕಾರದ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ ರವರಿಗೆ ಸಲ್ಲಿಸುವಂತೆ ತಿಳಿಸಿ ಪ್ರಕಟಿಸಿ ಆದೇಶಿಸಿದೆ.

| ಕ್ರ. ಸಂ. | ಹೆಸರು ಶ್ರೀ/ಶ್ರೀಮತಿ | ನೇ.ನೇ./ ಮುಂಬಡ್ತಿ / ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ಜೇಷ್ಠತೆಗೆ ನೈಜವಾಗಿ ಅರ್ಹತಾ ದಿನಾಂಕ |
|---|---|---|---|---|---|---|
| 1 | ಬಿ.ಎಂ. ತಿರಕನಗೌಡರ್ | ಮುಂಬಡ್ತಿ | 01.05.1956 | 07.11.1983 | 03.04.2009 | 03.04.2009 |
| 2 | ಡಾ॥ ಚೌಡೇಗೌಡ | ಮುಂಬಡ್ತಿ | 01.06.1956 | 20.12.1982 | 03.04.2009 | 03.04.2009 |
| 3 | ಎ.ವಿ. ರಂಗೇಶ್ | ಮುಂಬಡ್ತಿ | 06.09.1956 | 10.06.1983 | 03.04.2009 | 03.04.2009 |
| 4 | ಐಜಾಜ್ಸ್ ಅಹಮದ್ | ಮುಂಬಡ್ತಿ | 09.02.1957 | 30.10.1976 | 18.06.2014 | 18.06.2014 |
| 5 | ಎನ್.ಕೆ. ತಿಪ್ಪೇಸ್ವಾಮಿ | ಮುಂಬಡ್ತಿ | 18.02.1970 | 11.03.1998 | 08.01.2015 | 08.01.2015 |
| 6 | ಎಲ್. ಶಶಿಕುಮಾರ್ | ಮುಂಬಡ್ತಿ | 30.06.1966 | 30.04.1998 | 26.08.2015 | 26.08.2015 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ನಾಗರಾಜ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**PR-559**
**SC-50**

**ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ**

**(ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ)**

**ಹೆಚ್ಚುವರಿ ಅಧಿಸೂಚನೆ**

**ಸಂಖ್ಯೆ: ಲೋಇ/128/ಇಎಪಿ/2011, ಬೆಂಗಳೂರು, ದಿನಾಂಕ: 28–06–2016**

ಕರ್ನಾಟಕ ಹೆದ್ದಾರಿ ಕಾಯ್ದೆ 1964 ಕಲಂ 15ರ ಮೇರೆಗೆ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಜಮೀನುಗಳು ಕೊರಟಗೆರೆ–ಬಾವಲಿ ರಾಜ್ಯ ಹೆದ್ದಾರಿ 33 ರಲ್ಲಿ ಹುಲಿಯೂರುದುರ್ಗ ದಿಂದ ಕುಣಿಗಲ್ ವರೆಗೆ (ಲಿಂಕ್ ಸಂಖ್ಯೆ: 63–ಸಿ) ರಸ್ತೆ ಅಭಿವೃದ್ಧಿಪಡಿಸುವ ಉದ್ದೇಶಕ್ಕಾಗಿ ಯೋಜನಾ ನಿರ್ದೇಶಕರು, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ ಸದರಿ ಜಮೀನುಗಳು ರಾಜ್ಯ ಹೆದ್ದಾರಿ ಸಂಖ್ಯೆ: 33 ನ್ನು ಅಭಿವೃದ್ಧಿಪಡಿಸಲು ಅವಶ್ಯವಾಗಿದೆ ಎಂದು ಸರ್ಕಾರವು ಮನಗಂಡಿದೆ. ಆದುದರಿಂದ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ವಿವರಿಸಿರುವ ಜಮೀನುಗಳು ರಾಜ್ಯ ಹೆದ್ದಾರಿ ಸಂಖ್ಯೆ: 33 ರ ರಸ್ತೆ ಅಭಿವೃದ್ಧಿಗೆ ಅವಶ್ಯವಾಗಿದೆ ಎಂದು ಈ ಮೂಲಕ ಘೋಷಿಸಲಾಗಿದೆ. ಕರ್ನಾಟಕ ಹೆದ್ದಾರಿ ಕಾಯ್ದೆ 1964 ರ ಅಡಿಯಲ್ಲಿ ಈ ಕೆಳಕಂಡ ಜಮೀನುಗಳಲ್ಲಿ ಕೆಲಸ ನಿರ್ವಹಿಸುವ ಅಧಿಕಾರಿ, ಸಿಬ್ಬಂಧಿ ಅಥವಾ ಯೋಜನಾ ನಿರ್ದೇಶಕರ ಪರವಾಗಿ ಪ್ರತಿನಿಧಿಸುವವರನ್ನು ತಡೆಯುವುದಾಗಲಿ ಅಥವಾ ಅಡ್ಡಿ ಪಡಿಸುವುದಾಗಲಿ ಮಾಡಕೂಡದೆಂದು ಈ ಜಮೀನುಗಳಲ್ಲಿ ಆಸಕ್ತಿ ಹೊಂದಿರುವ ಎಲ್ಲಾ ವ್ಯಕ್ತಿಗಳಿಗೆ ಈ ಮೂಲಕ ಸೂಚಿಸಲಾಗಿದೆ.

ಈ ಅಧಿಸೂಚನೆ ಪ್ರಕಟಣೆಯಾದ ನಂತರ ಯೋಜನಾ ನಿರ್ದೇಶಕರು, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ, ಬೆಂಗಳೂರು ರವರ ಅನುಮತಿಯಿಲ್ಲದೆ ಸದರಿ ಜಮೀನುಗಳನ್ನು ವಿಲೇ ಮಾಡುವ ಒಪ್ಪಂದದ ಕ್ರಯ, ಕರಾರು, ಭೋಗ್ಯ, ಲೀಜ್, ಅದಲು–ಬದಲು ವಗ್ಯೆರೆ ಮಾಡುವಂತಿಲ್ಲ. ಸದರಿ ಜಮೀನುಗಳಲ್ಲಿ ಈ ಅಧಿಸೂಚನೆ ಪ್ರಕಟಣೆ ನಂತರ ಕಟ್ಟಡಗಳ ನಿರ್ಮಾಣ ಮತ್ತಿತರ ಅಭಿವೃದ್ಧಿ ಕೆಲಸಗಳನ್ನು ಮಾಡುವಂತಿಲ್ಲ. ಒಂದು ವೇಳೆ ಮಾಡಿದ್ದರೂ ಪರಿಹಾರ ಹಣ ನಿಗಧಿ ಮಾಡುವಾಗ ಅಂತಹ ವ್ಯವಹಾರದ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ.

ಸದರಿ ಜಮೀನುಗಳ ವಿವರಗಳನ್ನು ಪರಿಶೀಲನೆಗಾಗಿ ವಿಶೇಷ ಜಿಲ್ಲಾಧಿಕಾರಿಗಳು (ಭೂಸ್ವಾಧೀನ), ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ, ಬೆಂಗಳೂರು, ಸಹಾಯಕ ಆಯುಕ್ತರು (ಭೂಸ್ವಾಧೀನ), ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ, ಬೆಂಗಳೂರು ಮತ್ತು ಸಂಬಂಧಪಟ್ಟ ತಹಶೀಲ್ದಾರ್‌ರವರ ಕಚೇರಿಯಲ್ಲಿ ಇಡಲಾಗಿದೆ.

**ಗ್ರಾಮಠಾಣ**

| ಕ್ರ.ಸಂ | ಸ್ವತ್ತಿನ ಸಂಖ್ಯೆ | ಸ್ವತ್ತಿನ ವಿವರ | ಖಾತೆದಾರರನ / ಭೂಮಾಲೀಕನ ಹೆಸರು | ಭೂಸ್ವಾಧೀನಕ್ಕೆ ಒಳಪಡುವ ವಿಸ್ತೀರ್ಣ ಚ.ಮೀ.ಗಳಲ್ಲಿ | ಆಕಾರ | ಚಕ್ಕುಬಂದಿ | | | | ಮರಗಳು | ಬಾವಿ | ಕಟ್ಟಡ | ಷರಾ (ಒಟ್ಟು ವಿಸ್ತೀರ್ಣ) |
|---|---|---|---|---|---|---|---|---|---|---|---|---|---|
| | | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ | | | | |
| 1 | 2 | 3 | 4 | 5 | 6 | 7 | | | | 8 | 9 | 10 | 11 |
| ಗ್ರಾಮ: ದೊಡ್ಡಮಾವತ್ತೂರು (ಗ್ರಾಮಾಠಾಣ) | | | ಹೋಬಳಿ : ದೊಡ್ಡಮಾವತ್ತೂರು ಗ್ರಾಮಪಂಚಾಯ್ತಿ | | | ತಾಲ್ಲೂಕು : ಕುಣಿಗಲ್ | | | | ಜಿಲ್ಲೆ: ತುಮಕೂರು | | | |
| 1 | 7.1 | ಖಾಲಿ ನಿವೇಶನ | *ಡಿ.ಎಲ್. ತಿಬ್ಬೇಗೌಡ ಬಿನ್ ಡಿ.ಟಿ. ಲಿಂಗಪ್ಪ | 10 ಚ.ಮೀ | – | ಉಳಿದ ಭಾಗ | ರಸ್ತೆ | ರಸ್ತೆ | ಬೇರೆಯವರ ಸ್ವತ್ತು | ಇಲ್ಲ | ಇಲ್ಲ | ಕಲ್ಲು ಚಪ್ಪಡಿ | |
| | | | ಒಟ್ಟು | 10 ಚ.ಮೀ | | | | | | | | | |

**ಘೋಷ್ವಾರೆ**

| ಕ್ರಮ ಸಂಖ್ಯೆ | ಗ್ರಾಮದ ಹೆಸರು | ಹೋಬಳಿ | ತಾಲ್ಲೂಕು | ಜಿಲ್ಲೆ | ಭೂಸ್ವಾಧೀನಕ್ಕೆ ಒಳಪಡುವ ಜಮೀನಿನ ವಿಸ್ತೀರ್ಣ (ಗ್ರಾಮಠಾಣ) | |
|---|---|---|---|---|---|---|
| | | | | | ಚ.ಮೀ | ಒಟ್ಟು |
| **1** | **2** | **3** | **4** | **5** | **6** | **7** |
| 1 | ದೊಡ್ಡಮಾವತ್ತೂರು (ಗ್ರಾಮಠಾಣ) | ದೊಡ್ಡಮಾವತ್ತೂರು ಗ್ರಾಮಪಂಚಾಯ್ತಿ | ಕುಣಿಗಲ್ | ತುಮಕೂರು | 10 ಚ.ಮೀ | 10 ಚ.ಮೀ |
| | | | | ಒಟ್ಟು | 10 ಚ.ಮೀ | 10 ಚ.ಮೀ |

ಸಂಖ್ಯೆ: ಲೋಇ/128/ಇಎಪಿ/2011

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಇಂ. ವಿಜಯ್. ಭೀ. ಚಂದಾಪುರ**
ವಿಶೇಷಾಧಿಕಾರಿ
ಬಾಹ್ಯ ಅನುದಾನಿತ ಯೋಜನೆಗಳು (EAP)
ಲೋಕೋಪಯೋಗಿ, ಬಂದರು ಹಾಗೂ
ಒಳನಾಡು ಜಲ ಸಾರಿಗೆ ಇಲಾಖೆ

**P.R.611**
**SC-200**

## ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**(ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ)**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ: ಲೋಇ/65/ಇಎಪಿ:2011, ಬೆಂಗಳೂರು, ದಿನಾಂಕ: 16-07-2016**

ಕರ್ನಾಟಕ ಹೆದ್ದಾರಿ ಕಾಯ್ದೆ 1964 ಕಲಂ 15ರ ಮೇರೆಗೆ ಹುಣಸನಹಳ್ಳಿ-ಚಿಕ್ಕಹಳ್ಳಿ ರಾಜ್ಯ ಹೆದ್ದಾರಿ 03 ರಲ್ಲಿ ಮಾಗಡಿ ಯಿಂದ ಎನ್‌ಹೆಚ್-48 ವರೆಗೆ (ಲಿಂಕ್ ನಂ:64-ಸಿ) ರಸ್ತೆ ಅಭಿವೃದ್ಧಿಪಡಿಸುವ ಉದ್ದೇಶಕ್ಕಾಗಿ ಸರ್ಕಾರದ ಅಧಿಸೂಚನೆ ಸಂಖ್ಯೆ: ಲೋಇ65ಇಎಪಿ:2011, ಬೆಂಗಳೂರು, ದಿನಾಂಕ: 01-06-2013 ರಲ್ಲಿ ಅಧಿಸೂಚನೆ ಪ್ರಕಟಿಸಲಾಗಿದ್ದು, ಸದರಿ ಜಮೀನು ಈ ಹಿಂದಿನ ಕಲಂ 15 ರ ಅಧಿಸೂಚನೆಯಲ್ಲಿ ನಮೂದಿಸಿರುವಂತೆ ಖುಷ್ಕಿ ಎಂದು ಪರಿಗಣಿಸಿ ಪರಿಹಾರ ನೀಡಲಾಗಿದೆ. ಹಿಡುವಳಿದಾರರು ದಿನಾಂಕ: 12-05-2015 ರಂದು ಸಹಾಯಕ ಆಯುಕ್ತರು (ಭೂಸ್ವಾ) ರವರ ಕಛೇರಿಗೆ ನೀಡಿದ ಲಿಖಿತ ಮನವಿಯಲ್ಲಿ ತಿಳಿಸಿರುವಂತೆ ತಿರುಮಲೆ ಗ್ರಾಮದ ಸರ್ವೆ ನಂ. 114 ಬಾಗಾಯ್ತು ಆಗಿರುವುದರಿಂದ ವ್ಯತ್ಯಾಸದ ಪರಿಹಾರ ನೀಡುವಂತೆ ಕೋರಿದ ಮೇರೆಗೆ ದಿನಾಂಕ: 05-08-2015 ರಂದು ಭೂಮಾಪಕರು ಸ್ಥಳ ಪರಿಶೀಲಿಸಿ ನೀಡಿರುವ ವರದಿ ಹಾಗೂ ಲಗತ್ತಿಸಿರುವ ಆಕಾರ ಬಂದಿನಂತೆ ಬಾಗಾಯ್ತು ಎಂದು ನಮೂದಾಗಿರುವುದರಿಂದ ಈ ಹಿಂದೆ ಕಲಂ 15 ರ ಅಧಿಸೂಚನೆ ಹೊರಡಿಸಿರುವ ಮುನ್ನವೆ ಬಾಗಾಯ್ತು ಎಂದು ವರ್ಗೀಕರಿಸಿರುವುದರಿಂದ ಕಲಂ 15 ರಲ್ಲಿ ತಿದ್ದುಪಡಿ ಮಾಡಲು ಸಹಾಯಕ ಆಯುಕ್ತರು (ಭೂಸ್ವಾ), ಬೆಂಗಳೂರು ವಿಭಾಗ ರವರು ಸಲ್ಲಿಸಿರುವ ಪ್ರಸ್ತಾವನೆ ಮೇರೆಗೆ ಯೋಜನಾ ನಿರ್ದೇಶಕರು ಕಲಂ 15ರ ತಿದ್ದುಪಡಿ ಅಧಿಸೂಚನೆಯನ್ನು ಹೊರಡಿಸಲು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುವಂತೆ ತಿದ್ದುಪಡಿ ಮಾಡಲಾಗಿದೆ.

